CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೫, ೨೦೦೩ (ಆಶ್ವಯುಜ ೩ ಶಕ ವರ್ಷ ೧೯೨೫) | ಸಂಚಿಕೆ ೩೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವಿಜಾಪೂರ ವಿಭಾಗ,**
**ವಿಜಾಪೂರ ಇವರ ನ್ಯಾಯಾಲಯ**
**ವಾಹನ ಮುಟ್ಟುಗೋಲು ಆದೇಶ**

**ನಂ. ಪಿಎಸ್: ಸಿಆರ್: ನಂ.128:2001: ಬಿಬಿಎಲ್-ಎಂಸಿ: 02-03 ದಿನಾಂಕ: 25ನೇ ಆಗಸ್ಟ್ 2003.**

**ಫಿರ್ಯಾದುದಾರರು:** ಪಿ. ಎಸ್. ಐ.
ಬಬಲೇಶ್ವರ ತಾ: ವಿಜಾಪೂರ ಜಿ: ವಿಜಾಪೂರ.

**ಆರೋಪಿಗಳು :**
1. ರವಿ ಹಣಮಂತ ಹಳ್ಳದಕೇರಿ ಸಾ: ನಿಡೋಣಿ
2. ಹಾಬಿಸಾಬ ಬಂದಗಿಸಾಬ ಕೊರಬು ಸಾ: ನಿಡೋಣಿ
3. ತುಕಾರಾಮ ಭೀಮಪ್ಪ ಕಟ್ಟಿಮನಿ ಸಾ: ನಿಡೋಣಿ

**ಬಾಧ್ಯತೆದಾರರು :** ಶ್ರೀ. ಮಹಾದೇವ ನಿಂಗನಗೌಡಪ್ಪ ಪಾಯಗೋಣಿ
ಸಾ: ಹಿಪ್ಪರಗಿ ತಾ: ಜಮಖಂಡಿ ಜಿ: ಬಾಗಲಕೋಟೆ
(ಎಂವೈಜೆ 9264 ಬುಲೆಟ್ ಮೋಟರ್‌ಸೈಕಲ್ ಮಾಲೀಕರು)

**ಪ್ರಸ್ತಾವನೆ:**

ಪಿ.ಎಸ್.ಐ. ಬಬಲೇಶ್ವರ ಇವರ ಪ್ರಥಮ ವರ್ತಮಾನ ವರದಿ ಅನುಸಾರ ದಿನಾಂಕ: 29.9.2001 ರಂದು ಬಂದೋಬಸ್ತಿ ಡ್ಯೂಟಿಯಿಂದ ವಿಜಾಪೂರದಿಂದ ಬಬಲೇಶ್ವರಕ್ಕೆ ಬರುವಾಗ- ಬಬಲೇಶ್ವರ ವಿಜಾಪೂರ ರೋಡ್ ಅಡವಿ ಸಂಗಾಪೂರ ಕ್ರಾಸ್ ಹತ್ತಿರ (ಬಬಲೇಶ್ವರ ಪಿ. ಎಸ್. ದಿಂದ ಉತ್ತರಕ್ಕೆ 7 ಕಿಮಿ)ದಲ್ಲಿ ಬಜಾಜ್ ಕಂಪನಿಯ ಟಂ ಟಂ (ಕೆಎ-28: 5530) ಗಾಡಿಯು ಪೊಲೀಸ್‌ನವರನ್ನು ನೋಡಿ ವೇಗವಾಗಿ ಅಡವಿ ಸಂಗಾಪೂರದ ಕಡೆಗೆ ಹೊರಟಿದ್ದಾಗ ತಡೆದು ತಪಾಸಿಸಲಾಗಿ ಸದರಿ ವಾಹನದಲ್ಲಿ ಅನಧಿಕೃತವಾಗಿ 35 ಕೆಜಿಯಷ್ಟು ಶ್ರೀಗಂಧವನ್ನು ಅಕ್ರಮ ಕಳ್ಳ ಸಾಗಾಣಿಕೆ ಮಾಡುತ್ತಿರುವುದು ಕಂಡು ಬಂದಿರುತ್ತದೆ. ಆಗ ಆರೋಪಿ-2 ಮತ್ತು ಆರೋಪಿ -3 ಇವರನ್ನು ವಿಚಾರಿಸಿದಾಗ ಬುಲೆಟ್ ಮೋಟಾರ್ ಸೈಕಲ್ ಸಂಖ್ಯೆ ಎಂವೈಜೆ-9264 ನ್ನು ಹೊಂದಿರುವ ಆರೋಪಿ-1 ಈತನು ಸಹ ಅವರುಗಳ ಜೊತೆ ಇದ್ದು ಬುಲೆಟ್ ಮೋಟಾರ್ ಸೈಕಲ್ ಎಂವೈಜೆ9264 ನ್ನೊಂದಿಗೆ ರಸ್ತೆಯ ಮೇಲಿನ ಹಾಲಚಾಲನ್ನು ತಿಳಿದುಕೊಳ್ಳಲು ಹೋಗಿರುವುದಾಗಿ ತಿಳಿದುಕೊಂಡು, ಸದರಿ ಬುಲೆಟ್ ಮೋಟರ್ ಸೈಕಲನ್ನು ಮತ್ತು ಬಜಾಜ್ ಟಂ ಟಂ ಕೆಎ-28: 5530 ಇವುಗಳನ್ನು ಅಂದಾಜು 35 ಕೆಜಿ ಶ್ರೀಗಂಧ ಕಟ್ಟಿಗೆಯ ತುಂಡುಗಳೊಂದಿಗೆ ಜಪ್ತಿ ಮಾಡಿ ಅಪರಾಧ ಸಂಖ್ಯೆ: 128: 2001 ರಡಿ ಪ್ರಕರಣ ದಾಖಲಿಸಿ, ಸ್ಯಾಂಪಲ್ ತುಂಡನ್ನು ಹೊರತುಪಡಿಸಿ ಜಪ್ತಿ ಮಾಡಿದ ವಾಹನಗಳನ್ನು ಹಾಗೂ ಶ್ರೀಗಂಧದ ತುಂಡುಗಳ ಸಮೇತ ಜೆಎಂಎಫ್‌ಸಿ - 11ನೇ ನ್ಯಾಯಾಲಯ, ವಿಜಾಪೂರ ಅನುಮತಿಯ ಮೇರೆಗೆ ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವಿಜಾಪೂರ ವಿಭಾಗ, ವಿಜಾಪೂರ ಇವರಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ನಿಯಮಾವಳಿಗಳ ಮೇರೆಗೆ ಸೂಕ್ತ ಕ್ರಮ ಕೈಕೊಳ್ಳುವ ಕುರಿತು ಹಾಜರುಪಡಿಸಿದ್ದು ಇರುತ್ತದೆ.

ಮುಂದುವರೆದು ಈ ನ್ಯಾಯಾಲಯದಿಂದ ನಡವಳಿಕೆಗಳನ್ನು ನಡೆಸಲಾಗಿ ವಾಹನದ ಮಾಲೀಕರಾದ ಶ್ರೀ ಮಹಾದೇವ ನಿಂಗನಗೌಡಪ್ಪ ಪಾಯಗೋಣಿ ಸಾ: ಹಿಪ್ಪರಗಿ ತಾ: ಜಮಖಂಡಿ ಜಿ: ಬಾಗಲಕೋಟೆ ಇವರು ನ್ಯಾಯವಾದಿಗಳ ಮೂಲಕ ದಿನಾಂಕ: 18.2.2002 ರಂದು ಅರ್ಜಿ ಸಲ್ಲಿಸಿ ಬುಲೆಟ್ ಮೋಟರ್ ಸೈಕಲ್ ಎಂವೈಜೆ-9264 ನ್ನು ಮಾಲೀಕರ ಮಧ್ಯಂತರ ಸುಪರ್ದಿಗೆ ಬಿಡುಗಡೆ ಮಾಡಲು ಕೋರಿದ್ದು ಇದೆ. ಸದರಿ ಬೇಡಿಕೆಯನ್ನು ಈ ನ್ಯಾಯ ಪ್ರಾಧಿಕಾರದ ಆದೇಶ ದಿನಾಂಕ: 19.3.2002ರ ಮೇರೆಗೆ ತಿರಸ್ಕರಿಸಲಾಗಿದೆ. ಹಾಗೂ ಸದರಿ ಮೋಟರ್ ಸೈಕಲ್ ಎಂವೈಜೆ-9264 ರ ವಾಹನ ಮಾಲೀಕರಿಗೆ ಕರ್ನಾಟಕ ಅರಣ್ಯ ಕಾಯ್ದೆ 1963 ರಡಿ ಸೆಕ್ಷನ್ 71ಬಿ ಯ ಮೇರೆಗೆ ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ಅಕ್ರಮವಾಗಿ ತೊಡಗಿದ್ದು ಜಪ್ತಿ ಮಾಡಲಾದ ಸದರಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ನೋಟಿಸನ್ನು ದಿನಾಂಕ: 4.2.2003 ರಂದು ನೋಂದಾಯಿತ ಅಂಚೆ ಮೂಲಕ ಕಳುಹಿಸಲಾಗಿತ್ತು. ಆದರೆ ಸದರಿ ಕಾರಣ ಕೇಳಿ ಕಳುಹಿಸಲಾದ ನೋಟೀಸಿನ ನೋಂದಾಯಿತ ಲಕೋಟೆಯು ಈ ಕಾರ್ಯಾಲಯಕ್ಕೆ ದಿನಾಂಕ: 17.2.2003 ರಂದು ಮರಳಿ ಬಂದು ತಲುಪಿರುತ್ತದೆ. ಲಕೋಟೆಯ ಮೇಲೆ ಅಂಚೆ ಇಲಾಖೆಯವರು ದಿನಾಂಕ: 6.2.2003 ರಿಂದ ಷರಾ ನಮೂದಿಸಿದ್ದು ದಿನಾಂಕ: 13.2.2003 ರಂದು "ಸದರಿ ಮಾಲೀಕರು ನಿರಾಕರಿಸಿದ್ದರಿಂದ ಕಳಿಸಿದವರಿಗೆ ಪರತ" ಎಂದು ಶರಾ ದಾಖಲಿಸಿರುತ್ತಾರೆ. ಇದರಿಂದಾಗಿ ಸದರಿ ವಾಹನವು ಅಕ್ರಮ ಅರಣ್ಯ ಅಪರಾಧದಲ್ಲಿ ಭಾಗಿಯಾಗಿರುವುದಾಗಿ ಪರಿಗಣಿಸಿ ಈ ಆದೇಶ.

**ಆದೇಶ**

ಪ್ರಕರಣದ ಈ ಮೇಲ್ಕಂಡ ವಿದ್ಯಮಾನಗಳನುಸಾರವಾಗಿ ಶ್ರೀ ಜಿ. ಎಸ್. ನುಸರತ್ ಷರೀಫ್ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ವಿಜಾಪೂರ ವಿಭಾಗ, ವಿಜಾಪೂರ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಎ ಯಿಂದ ಜಿ ಮತ್ತು ತದನಂತರದ ತಿದ್ದುಪಡಿಗಳಡಿಯಲ್ಲಿ ಪಿ.ಎಸ್.ಐ. ಬಬಲೇಶ್ವರ ಇವರ ಅಪರಾದ ಸಂಖ್ಯೆ: 128: 2001 ರಲ್ಲಿ ಜಪ್ತಿ ಮಾಡಲಾದ ವಾಹನಗಳಲ್ಲಿ ಒಂದಾದ ಬುಲೆಟ್ ಮೋಟರ್‌ಸೈಕಲ್ ನೋಂದಣಿ ಸಂಖ್ಯೆ ಎಂವೈಜೆ-9264 ಚಾಸಿಸ್ ನಂ. ಬಿ-177857:8 ಜಿಎಕ್ಸ್, ಇಂಜಿನ್ ಸಂಖ್ಯೆ: 177857 ಇದನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನ ಮತ್ತು ವಾಹನದ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೆ ಮಾಡಲು ಆದೇಶಿಸಿದೆ.

ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳೊಳಗಾಗಿ ಅಧಿಕೃತ ಪ್ರಾಧಿಕಾರದ ಮುಂದೆ ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಹೇಳಿ ಬರೆಯಿಸಿ ತಪ್ಪುಗಳನ್ನು ಸರಿಪಡಿಸಿ ನನ್ನ ರುಜು ಹಾಗೂ ಮೊಹರಿನೊಂದಿಗೆ ದಿನಾಂಕ: 25.8.2003 ರಂದು ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ.

**ಜಿ. ಎಸ್. ನುಸರತ್ ಷರೀಫ್**

ಪಿ.ಆರ್.1021

ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ
ಸಂರಕ್ಷಣಾಧಿಕಾರಿಗಳು, ವಿಜಾಪೂರ ವಿಭಾಗ, ವಿಜಾಪೂರ.

**ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ: 591/2001-02 ದಿನಾಂಕ: 16ನೇ ಜುಲೈ 2003**

**ಲಕ್ಕವಳ್ಳಿ ಪೋ.ರಾ. ಕ್ರೈಂ ಸಂ. 2/2002 ದಿನಾಂಕ: 4ನೇ ಜನವರಿ 2002**

**ಅಬಕಾರಿ ಉಪ ನಿರೀಕ್ಷಕರು, ತರೀಕೆರೆ ಉಪವಲಯ ಇವರ ಪ್ರವವ ಸಂಖ್ಯೆ: 45/2001-02 ದಿನಾಂಕ: 7ನೇ ಫೆಬ್ರವರಿ 2002**

**ಉಪಸ್ಥಿತರು :** ಕೆ.ಸಿ. ಹರಿದಾಸ್ ಅಧಿಕಾರಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು** | **ವಿರುದ್ಧ** | **ಆಪಾದಿತರು** |
|---|---|---|
| ಆರಕ್ಷಕ ಉಪ ನಿರೀಕ್ಷಕರು | | ವಿ.ವೆಂಕಟೇಶ್ ಬಿನ್ ಲೇಟ್ ವೆಳ್ಳಿಯಪ್ಪ |
| ಲಕ್ಕವಳ್ಳಿ ಪೋ.ಠಾಣೆ | | ಸಾಕಿನ್ ರಂಗೇನ ಹಳ್ಳಿ, ತರೀಕೆರೆ ತಾ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 4.1.2002 ರಂದು ಆರಕ್ಷಕ ಉಪ ನಿರೀಕ್ಷಕರು, ಲಕ್ಕವಳ್ಳಿ ಪೋಲಿಸ್ ಠಾಣೆ ಇವರು ಆಟೋರಿಕ್ಷಾ ಸಂ. ಕೆ.ಎ.17.58 ಅನ್ನು ಅಕ್ರಮ ಸ್ಪಿರಿಟ್ ಮತ್ತು ಸಾರಾಯಿ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 10.000 ಲೀ. ಸ್ಪಿರಿಟ್ ಮತ್ತು 2.500 ಲೀ ಸಾರಾಯಿಹೊಂದಿದ್ದು, ಸದರಿ ಸ್ಪಿರಿಟ್ ಮತ್ತು ಸಾರಾಯಿ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ವಿ. ವೆಂಕಟೇಶ್ ಬಿನ್ ಲೇಟ್ ವೆಳ್ಳಿಯಪ್ಪ ಇವರು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರು ಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ಧೃಡಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿದೊರೆತ ಸ್ಪಿರಿಟ್ ಮತ್ತು ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿಗೊಳಿಸಿ ಕ್ರೈಂ. ಸಂ. 2/2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ತರೀಕೆರೆ ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ತನಿಖೆ ಮುಂದುವರೆಸಿ ಪ್ರ.ವ.ವ. 45/2001-02 ದಿನಾಂಕ: 7.2.2002 ರಲ್ಲಿ ಮೊಕದ್ದಮ್ಮೆಯನ್ನು ದಾಖಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ, ಸ್ಪಿರಿಟ್ ಮತ್ತು ಸಾರಾಯಿಗೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಆಪಾದಿತರಿಗೆ ಕಲಂ. 43 (ಬಿ) ಅಡಿಯಲ್ಲಿ ನೋಟೀಸ್ ನೀಡಲು ಕ್ರಮ ಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರಿಂದ ಪಡೆಯಲಾದ ಬಿ. ವರದಿಯಲ್ಲಿ ಶ್ರೀ ಬಿ. ಕಾಳಪ್ಪ ಬಿನ್ ಸಂಗಪ್ಪ, ಡೋರ್ ಸಂಖ್ಯೆ. 119, ಕಬ್ಬೂರು, ಬಸಪ್ಪ ನಗರ, 4ನೇ ಕ್ರಾಸ್, ದಾವಣಗೆರೆ ಇವರು ವಾಹನದ ಮಾಲೀಕರೆಂದು ಹಾಗೂ ಸದರಿ ವಾಹನಕ್ಕೆ ಸಂಬಂಧಿಸಿದ ಕ್ಲಿಯರೆನ್ಸ್ ಸರ್ಟಿಫಿಕೇಟ್ ಅನ್ನು ಪಡೆದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇಲ್ಲಿಗೆ ದಿನಾಂಕ: 20.7.2000 ರಂದು ಹೋಗಿರುವುದರಿಂದ, ಹೆಚ್ಚಿನ ಮಾಹಿತಿಗಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರೊಂದಿಗೆ ಪತ್ರ ವ್ಯವಹಾರ ಮಾಡಲು ತಿಳಿಸಿದ ಮೇರೆಗೆ, ಪತ್ರ ವ್ಯವಹಾರ ನಡೆಸಲಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರು ದಿನಾಂಕ: 29.07.2002 ಮತ್ತು 3.12.2002ರ ವರದಿಯಲ್ಲಿ ಸದರಿ ವಾಹನವು ಮಾಲೀಕತ್ವ ವರ್ಗಾವಣೆಯಿಂದಾಗಲೀ ಅಥವಾ ವಿಳಾಸ ಬದಲಾವಣೆಯಿಂದಾಗಲೀ ತಮ್ಮ ಕಛೇರಿಗೆ ಬಂದಿರುವುದಿಲ್ಲವೆಂದು ತಿಳಿಸಿದ ಮೇರೆಗೆ ಶ್ರೀ ಬಿ. ಕಾಳಪ್ಪ ಬಿನ್ ಸಂಗಪ್ಪ, ಡೋರ್ ಸಂಖ್ಯೆ. 119, ಕಬ್ಬೂರು, ಬಸಪ್ಪ ನಗರ, 4ನೇ ಕ್ರಾಸ್, ದಾವಣಗೆರೆ ಇವರಿಗೆ ಕಲಂ. 43(ಬಿ) ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ನೋಟೀಸ್ ಜಾರಿಯಾಗದೇ ಮರಳಿ ಬಂದಿದ್ದರಿಂದ ಈ ಬಗ್ಗೆ ಪುನಃ ನೋಟೀಸ್ ಅನ್ನು ತನಿಖಾಧಿಕಾರಿಗಳ ಮುಖಾಂತರ ಜಾರಿಗೊಳಿಸಲು ಕ್ರಮಕೈಗೊಳ್ಳಲಾಗಿ ನೋಟೀಸ್ ಅನ್ನು ಜಾರಿಗೊಳಿಸಿ, ಜಾರಿಯಾದ ಬಗ್ಗೆ ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ದಿನಾಂಕ: 27.2.2002 ರಂದು ವಾಹನದ ಮಾಲೀಕರಾದ ಶ್ರೀ ಬಿ. ಕಾಳಪ್ಪ ಬಿನ್ ಸಂಗಪ್ಪ, ಡೋರ್ ಸಂಖ್ಯೆ 119, ಕಬ್ಬೂರು, ಬಸಪ್ಪ ನಗರ, 4ನೇ ಕ್ರಾಸ್, ದಾವಣಗೆರೆ ಇವರು ಪ್ರಾಧಿಕಾರಕ್ಕೆ ಅಂಚೆ ಮೂಲಕ ಕಳುಹಿಸಿರುವ ಮನವಿಯಲ್ಲಿ ವಾಹನ ಸಂಖ್ಯೆ ಕೆಎ. 17.58 ಆಟೋರಿಕ್ಷಾ ಮಾಲೀಕರು ತಾವೇ ಆಗಿರುವುದಾಗಿ ತಿಳಿಸಿ, ಸದರಿ ವಾಹನವನ್ನು 5 ವರ್ಷಗಳ ಹಿಂದೆ ಬೇರೊಬ್ಬರಿಗೆ ಮಾರಾಟ ಮಾಡಿ ಸಂಬಂಧಪಟ್ಟ ಎಲ್ಲಾ ದಾಖಲಾತಿ ಪತ್ರಗಳಿಗೆ ಸಹಿ ಮಾಡಿ ಕೊಟ್ಟಿರುವುದಾಗಿ ತಿಳಿಸಿ, ಈ ಕಾರಣದಿಂದ ಸದರಿ ವಾಹನಕ್ಕೂ ಹಾಗೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವಾದ್ದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ತಮ್ಮ ತಂಟೆ ತಕರಾರು ಯಾವುದು ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ ಸುಮಾರು ಒಂದು ವರ್ಷ, ಆರು ತಿಂಗಳುಗಳ, ಅವಧಿಯು ಕಳೆದಿದ್ದು, ಮುಟ್ಟುಗೋಲಿನ ನಡುವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಜಕ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ವಾಹನದ ಮಾಲೀಕರಿಗೆ ವಾಹನದ ಮೇಲೆ ಹಕ್ಕು ಸಾಧಿಸಲು ದೀರ್ಘಾವಧಿಯ ಸಮಯವನ್ನು ನೀಡಿ, ಈ ಅವಧಿಯಲ್ಲಿ ಈ ಪ್ರಾಧಿಕಾರದಿಂದ ನೀಡಲಾದ ಕಲಂ. 43(ಬಿ) ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಳ್ಳಲಾಗಿ ನೋಟೀಸ್ ಅನ್ನು ಸ್ವೀಕರಿಸಿದ ವಾಹನದ ಮಾಲೀಕರು ಸಲ್ಲಿಸಿದ ಮನವಿಯ ಅಂಶಗಳನ್ನು ಪರಿಶೀಲಿಸಿದಾಗ ಹಾಗೂ ಈ ದೀರ್ಘಾವಧಿಯ ಸಮಯದಲ್ಲಿ ಬೇರೆ ಯಾರೊಬ್ಬರು ಅಧಿಕೃತ ದಾಖಲಾತಿ ಪತ್ರಗಳನ್ನು ಹಾಜರುಪಡಿಸಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ವಾಹನದ ಮಾಲೀಕರು ಈ ಕೃತ್ಯದಲ್ಲಿ ಭಾಗಿಯಾಗಿ, ಕೃತ್ಯಕ್ಕೆ ವಾಹನವನ್ನು ಕಾನೂನಿನ ಅರಿವಿದ್ದುಕೊಂಡು ಬಳಸಿರುವ ಅಂಶಗಳು ಮೇಲ್ನೋಟಕ್ಕೆ ಕಂಡು ಬರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ.43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಸಾಕ್ಷ್ಯಗಳ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ. ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷ್ಯರಾಗಿರುವುದರಿಂದ ಅಲ್ಲದೇ ಕಲಂ 43ರ ಅಡಿಯಲ್ಲಿ ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳ ಒಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ 1967ರ ಕಲಂ. 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ, ಯಾರೊಬ್ಬರೂ ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ.43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ವಾಹನವನ್ನು ಇನ್ನು ಹೆಚ್ಚು ದಿನಗಳ ಕಾಲ ತಟಸ್ಥ ಸ್ಥಿತಿಯಲ್ಲಿ ಇಲಾಖೆಯ ವಶದಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ಸ್ವಾಭಾವಿಕ ಬದಲಾವಣೆಗಳಿಗನುಗುಣವಾಗಿ ವಾಹನದ ಮೌಲ್ಯವು ಹಾಲಿ ಈಗಿರುವ ಮೌಲ್ಯಕ್ಕಿಂತ ಇಳಿಮುಖಗೊಂಡು ಸರ್ಕಾರದ ರಾಜಸ್ವಕ್ಕೆ ಧಕ್ಕೆಯುಂಟಾಗುವ ಸಂಭವವಿರುವುದರಿಂದ ಮತ್ತು ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು, ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

ಕೆ. ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ. 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ. ಕೆಎ. 17.58 (ಆಟೋರಿಕ್ಷಾ)ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 16ನೇ ಜುಲೈ 2003 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಅಬ್ಕಾರಿ ಅಧೀಕ್ಷಕರು
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.1023

## ಸಮಾಜ ಕಲ್ಯಾಣ ಇಲಾಖೆ

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ್ ಬಳ್ಳಾರಿ

**ಪ್ರಕಟಣೆ ಸಂ:ಜಿಕಸಅ:ಎಸ್6: ಸಿಆರ್: 2003-04 ಬಳ್ಳಾರಿ ದಿನಾಂಕ: 27ನೇ ಆಗಸ್ಟ್ 2003**

**ವಿಷಯ :** 2003-04 ನೇ ಸಾಲಿನಲ್ಲಿ ಪ.ಜಾತಿ:ಪ. ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಆದೇಶ ಸಂ: ಎಸ್‌ಡಬ್ಲ್ಯೂಎಸ್ 68:ಎಸ್‌ಇಡಬ್ಲ್ಯೂ 89, ಬೆಂಗಳೂರು, ದಿನಾಂಕ: 2.11.90
2. ಸರ್ಕಾರದ ಆದೇಶ ಸಂ: ಸಕಇ2: 421: ಪಕವಿ: 95: ಬೆಂಗಳೂರು, ದಿನಾಂಕ: 29.9.97.
3. ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಸಕಇ2: ಸಮನ್ವಯ: 6ಸಿಆರ್14: 97-98, ದಿನಾಂಕ: 7.8.97 ಹಾಗೂ 14.10.97
4. ಸರ್ಕಾರದ ಆದೇಶ ಸಂ:ಸಕಇ: 535: ಸಕವಿ: 2000 ಬೆಂಗಳೂರು ದಿನಾಂಕ: 28.3.2001.

ಬಳ್ಳಾರಿ ಜಿಲ್ಲೆಯಲ್ಲಿರುವ ಪ.ಜಾತಿ:ಪ. ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2003-04ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪ.ಜಾತಿ: ಪ. ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪ.ಜಾತಿ: ಪ.ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1. ಅಭ್ಯರ್ಥಿಗಳು ಪ.ಜಾತಿ: ಪ.ವರ್ಗಕ್ಕೆ ಸೇರಿದವರಾಗಿರಬೇಕು.
2. ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
3. ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದವರು ಮಾತ್ರ ಈ ತರಬೇತಿಗೆ ಅರ್ಹರು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು).
4. ಈ ತರಬೇತಿಗೆ 5 ಪ.ಜಾತಿ. ಪ.ವರ್ಗದ ಅಭ್ಯರ್ಥಿಗಳನ್ನು ಮಾತ್ರ ಆಯ್ಕೆಮಾಡಲಾಗುವುದು. ಅದರಲ್ಲಿ 1 ಸ್ಥಾನವನ್ನು ಮಹಿಳಾ ಅಭ್ಯರ್ಥಿಗೆ ಮೀಸಲಿಡಲಾಗುವುದು.
5. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು: ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.
6. ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ. 1000-00 (ಒಂದು ಸಾವಿರ ಮಾತ್ರ) ಸ್ಟೈಫಂಡ್ ನೀಡಲಾಗುವುದು.
7. ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.
8. ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್‌ಎಸ್‌ಎಲ್‌ಸಿ) ಅಂಕಪಟ್ಟಿ ಪ್ರತಿ ಸಲ್ಲಿಸಬೇಕು.
9. ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು. (ಕೇಂದ್ರ: ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).
10. ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳುಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇಕಡಾ 10 ರಷ್ಟು ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬಳ್ಳಾರಿರವರಿಗೆ ಬರೆದುಕೊಡತಕ್ಕದ್ದು.
11. ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೋಂದಣಿ ಮಾಡಿದ ಪ್ರಮಾಣ ಪತ್ರದ ಪ್ರತಿಗಳೊಂದಿಗೆ ಸಲ್ಲಿಸಬೇಕು.
12. ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿವಸದೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದು.

13. ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿಪ್ರತಿಯಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಬಳ್ಳಾರಿ ಇವರಿಗೆ ದಿನಾಂಕ: 8.10.2003 ಸಂಜೆ 5.30 ಗಂಟೆಯೊಳಗೆ ತಲುಪುವಂತೆ ಸಲ್ಲಿಸತಕ್ಕದ್ದು.
14. ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.
15. ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆಯುತ್ತಿದ್ದರೆ ಅಂತಹ ಅಭ್ಯರ್ಥಿಗಳು ಅರ್ಹರಿರುವುದಿಲ್ಲ.
16. ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ಪಡೆಯಬಹುದು.

**ಶ್ರೀ ಹನುಮಂತು**
ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು,
ಹಾಗೂ ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರಿಗೆ
ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**2003-04ನೇ ಸಾಲಿನಲ್ಲಿ ಆಡಳಿತ ನ್ಯಾಯಾಂಗ ತರಬೇತಿಗೆ ಪ.ಜಾತಿ: ಪ.ವರ್ಗದ ಕಾನೂನು ಪದವೀಧರರನ್ನು ಆಯ್ಕೆ ಮಾಡಲು ಅರ್ಜಿ ನಮೂನೆ.**

ಅಭ್ಯರ್ಥಿಯ
ಭಾವ ಚಿತ್ರ.

ಗೆ,
ಸದಸ್ಯ ಕಾರ್ಯದರ್ಶಿ,
ಆಡಳಿತ ನ್ಯಾಯಾಂಗ ತರಬೇತಿ
ಆಯ್ಕೆ ಸಮಿತಿ ಹಾಗೂ
ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ
ಬಳ್ಳಾರಿ.

1) ಅಭ್ಯರ್ಥಿಯ ಹೆಸರು ಮತ್ತು ಪೂರ್ಣ ವಿಳಾಸ :
2) ಅಭ್ಯರ್ಥಿಯು ಕಾನೂನು ಪದವಿಯನ್ನು ಪಾಸಾದ ವರ್ಷ ಮತ್ತು ದಿನಾಂಕ: (ಎಲ್ಲಾ ವರ್ಷದ ಅಂಕಪಟ್ಟಿ ಜೆರಾಕ್ಸ್ ಪ್ರತಿ ಸಲ್ಲಿಸುವುದು :
3) ಅಭ್ಯರ್ಥಿಯು ಹುಟ್ಟಿದ ದಿನಾಂಕ (ಎಸ್‌ಎಸ್‌ಎಲ್‌ಸಿ) ವರ್ಗಾವಣೆ ಪತ್ರ ಅಥವಾ ಅಂಕಪಟ್ಟಿ ಸಲ್ಲಿಸುವುದು ಮತ್ತು ಪ್ರಕಟಣೆಯ ಕೊನೆಯ ದಿನಾಂಕ ದಂದು ವಯಸ್ಸು :
4) ಅಭ್ಯರ್ಥಿಯ ಜಾತಿ ಪ.ಜಾತಿ: ಪ.ವರ್ಗ (ಜಾತಿ ಪ್ರಮಾಣ ಪತ್ರದ ನಕಲನ್ನು ಸಲ್ಲಿಸಬೇಕು :
5) ಅಭ್ಯರ್ಥಿಯು ವಕೀಲ ವೃತ್ತಿಯನ್ನು ಆರಂಭಿಸಿರುವ ಸ್ಥಳ, ತಾಲ್ಲೂಕು ಮತ್ತು ಜಿಲ್ಲೆ :
6) ಅಭ್ಯರ್ಥಿಯು ಈಗಾಗಲೇ ಯಾವುದಾದರೂ ನೌಕರಿಯಲ್ಲಿ ಇದ್ದರೆ?. ಹಾಗಿದ್ದಲ್ಲಿ ವಿವರ ಸಲ್ಲಿಸುವುದು. :
7) ಅಭ್ಯರ್ಥಿಯು ಈಗಾಗಲೇ ಯಾವುದಾದರೂ ಕಾನೂನು ತರಬೇತಿ ಪಡೆಯುತ್ತಿರುವರೆ? :
8) ಅಭ್ಯರ್ಥಿಯು ವಾರ್ಷಿಕ ಆದಾಯ ವೃತ್ತಿಯಿಂದ ಅಥವಾ ಸಂಬಳದ ವಿವರ :
9) ಅರ್ಜಿಯನ್ನು ಸಲ್ಲಿಸಲು ಕೊನೆಯ ದಿನಾಂಕ : 8.9.2003

**ಅಭ್ಯರ್ಥಿಯ ಹೇಳಿಕೆ:**

ಮೇಲೆ ನಮೂದಿಸಿದ ಎಲ್ಲಾ ಮಾಹಿತಿಗಳು ನಿಜವಾಗಿರುತ್ತವೆ ಹಾಗೂ ಸತ್ಯಕ್ಕೆ ದೂರವಾಗಿಲ್ಲವೆಂದು, ನನ್ನ ತಿಳುವಳಿಕೆಗೆ ಅನುಗುಣವಾಗಿ ದೃಢೀಕರಿಸಿದ್ದೇನೆ. ನಾನು ಒಂದು ವೇಳೆ ತರಬೇತಿಗೆ ಆಯ್ಕೆಯಾದಲ್ಲಿ 4 ವರ್ಷಗಳ ತರಬೇತಿಯನ್ನು ಪೂರ್ಣಗೊಳಿಸಲು ಒಪ್ಪಿದ್ದೇನೆ. ಇಲ್ಲವಾದಲ್ಲಿ ಪ್ರಕಟಣೆಯಲ್ಲಿ ತಿಳಿಸಿರುವಂತೆ ಕಾನೂನಿನ ಕ್ರಮಕ್ಕೆ ಒಳಗಾಗಲು ಬದ್ಧನಾಗಿದ್ದೇನೆ.

ಸ್ಥಳ :
ದಿನಾಂಕ: ಅಭ್ಯರ್ಥಿಯ ಸಹಿ.

ಪಿ.ಆರ್.1039

## ಅರಣ್ಯ ಇಲಾಖೆ

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ ಅರಣ್ಯ ಸಂಚಾರ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಪ್ರಕಟಣೆ ಸಂಖ್ಯೆ: ಎ1:ಅಸಂದ: ಅಮೊ:26:03-04 ಶಿವಮೊಗ್ಗ ದಿನಾಂಕ: 5ನೇ ಸೆಪ್ಟೆಂಬರ್ 03**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಶ್ರೀಗಂಧದ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಈ ಕೆಳಕಂಡ ವಾಹನಗಳನ್ನು ವಶಪಡಿಸಿಕೊಂಡು ಶ್ರೀಗಂಧವನ್ನೂ ಹಾಗೂ ಸದರಿ ವಾಹನಗಳನ್ನೂ ಕರ್ನಾಟಕ ಅರಣ್ಯ ಕಾಯಿದೆ 71-ಎ ಯ ಪ್ರಕಾರ ಮುಂದಿನ ದಾವೆ ನಡೆಸಲು ಈ ನ್ಯಾಯಾಲಯದ ಮುಂದೆ ಹಾಜರ್‌ಪಡಿಸಿರುತ್ತಾರೆ.

ಆದುದರಿಂದ ಸದರಿ ವಾಹನಗಳ ಸಂಬಂಧದಲ್ಲಿ ಯಾವುದೇ ಹಕ್ಕು ಬಾಧ್ಯತೆಗಳು ರುಜುವಾತುಪಡಿಸಲು ಇದ್ದಲ್ಲಿ ಅಂತಹ ವ್ಯಕ್ತಿಗಳು ತಮ್ಮಲ್ಲಿ ಇರುವ ವಾಹನದ ಮಾಲೀಕತ್ವದ ಮೂಲ ದಾಖಲಾತಿಗಳೊಂದಿಗೆ ಈ ಪ್ರಕಟಣೆಯು ಪ್ರಕಟವಾದ 30 (ಮೂವತ್ತು) ದಿವಸಗಳೊಳಗಾಗಿ ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲೀಕತ್ವವನ್ನು ರುಜುವಾತುಪಡಿಸುವುದು, ನಿಗದಿಪಡಿಸಿದ ಅವಧಿಯೊಳಗಡೆ ಯಾವುದೇ ಅಹವಾಲು ಇಲ್ಲವಾದಲ್ಲಿ ಅಥವಾ ನಂತರ ಯಾವುದೇ ಅಹವಾಲು ಬಂದಲ್ಲಿ ಅವನ್ನು ಪರಿಗಣಿಸಲಾಗುವುದಿಲ್ಲ ಹಾಗೂ 1963ರ ಕರ್ನಾಟಕ ಅರಣ್ಯ ಕಾಯ್ದೆಯ 71-ಎ ನಿಂದ ಎಫ್. ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು.

**ಮೊಕದ್ದಮೆ ದಾಖಲುಪಡಿಸಿದವರು:** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

| ಅ.ಮೊ. ಸಂಖ್ಯೆ ಮತ್ತು ದಿನಾಂಕ | ವಾಹನ ಮಾದರಿ ಹಾಗೂ ಅದರ ಸಂಖ್ಯೆ | ಛಾಸಿಯ ಸಂಖ್ಯೆ | ಇಂಜಿನ್ ಸಂಖ್ಯೆ |
|---|---|---|---|
| 26:03-04<br>30.08.03 | ಅಂಬಾಸೇಡರ್ ಕಾರು.<br>ಸಿ.ಟಿ.ಕ್ಯೂ-4683 | 111:548277<br>ಡಿಸೇಲ್ ಡಿಎಕ್ಸ್. | 6 ಇಹೆಚ್‌ಓ<br>35037 |

**ಕೆ. ಲೋಕನಾಥಶೆಟ್ಟಿ**
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

ಪಿ.ಆರ್.1040

## ಮೀನುಗಾರಿಕೆ ನಿರ್ದೇಶನಾಲಯ, ಮಹಾವೀರ ಕಾಂಪ್ಲೆಕ್ಸ್, ಕೆ. ಜಿ. ರಸ್ತೆ, ಬೆಂಗಳೂರು-9

## ಸಾರ್ವಜನಿಕ ಪ್ರಕಟಣೆ

**ಸಂಖ್ಯೆ: ಪಂವಾಯೋ: 17:2001-02 ದಿನಾಂಕ: 5ನೇ ಸೆಪ್ಟೆಂಬರ್ 2003**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ (2000 ಕರ್ನಾಟಕ ಹಕ್ಕು ಅಧಿನಿಯಮ 28) ಪ್ರಕಟಣೆ 3(ಬಿ) ರಡಿಯಲ್ಲಿ ಕರ್ನಾಟಕ ಸರ್ಕಾರದ ಮೀನುಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಕೆಳಕಂಡ ವಿವರಗಳನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಇಲಾಖೆಯ ವಿವರ:**

ಮೀನುಗಾರಿಕೆ ನಿರ್ದೇಶನಾಲಯವು ಸಚಿವಾಲಯ ಮಟ್ಟದಲ್ಲಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ನಿರ್ದೇಶಕರು ಈ ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ, ಈ ಇಲಾಖೆಯ ಸಂಘಟನಾ ವ್ಯವಸ್ಥೆಯ ನಕಾಶೆಯು ಕೆಳಕಂಡಂತಿರುತ್ತದೆ.

**ಮೀನುಗಾರಿಕೆ ಇಲಾಖೆಯ ಸಂಘಟನಾ ವ್ಯವಸ್ಥೆಯ ನಕಾಶೆ**



**ಕರ್ತವ್ಯದ ವಿವರಗಳು:**

ಮೀನುಗಾರಿಕೆ ನಿರ್ದೇಶನಾಲಯವು ರಾಜ್ಯದ ಮೀನುಗಾರಿಕೆಯ ಅಭಿವೃದ್ಧಿಗೆ ಹಾಗೂ ಮೀನುಗಾರರ ಕಲ್ಯಾಣಕ್ಕೆ ಕಾರ್ಯಕ್ರಮಗಳನ್ನು ರೂಪಿಸಿ, ಅನುದಾನ ಪಡೆದು, ಸರ್ಕಾರದ ಮಂಜೂರಾತಿ ಪಡೆದು ಮತ್ತು ಅಧೀನಾಧಿಕಾರಿಗಳ ಮೂಲಕ ಯೋಜನೆಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿರುತ್ತದೆ. ಮೀನುಗಾರಿಕೆ ಅಭಿವೃದ್ಧಿ ನಿಗಮ, ಮಹಾಮಂಡಳಿಗೆ ಅಗತ್ಯವಾದ ಯೋಜನೆಗಳನ್ನು ರೂಪಿಸುತ್ತದೆ.

**ಮೀನುಗಾರಿಕೆಗೆ ಸಂಬಂಧಪಟ್ಟಂತೆ ಕಾರ್ಯಹಂಚಿಕೆಯ ಸಂಕ್ಷಿಪ್ತ ವಿವರ:**

| | |
|---|---|
| ಮೀನುಗಾರಿಕೆ ಜಂಟಿ ನಿರ್ದೇಶಕರು (ಕರಾವಳಿ) | 1) ಕರಾವಳಿ ಮೀನುಗಾರಿಕೆ ಅಭಿವೃದ್ಧಿಗೆ ಮೀನುಗಾರರ ಕಲ್ಯಾಣ ಯೋಜನೆಗಳು, ಆಯವ್ಯಯ (ಪಿ.ಏ.ಸಿ) ಸಾರ್ವಜನಿಕ ಲೆಕ್ಕ ಪತ್ರ ಪರಿಶೀಲನೆಗೆ ಸಂಬಂಧಿಸಿದ ವಿಷಯಗಳು.<br>2) ವಾರ್ಷಿಕ ಯೋಜನೆ, ಪಂಚವಾರ್ಷಿಕ ಯೋಜನೆ, ಮೀನುಗಾರಿಕೆ ನೀತಿ ನಿಯಮಗಳು, ವಾರ್ಷಿಕ ವರದಿ ಮುಂತಾದ ವಿಷಯಗಳು.<br>3) ಹಿನ್ನೀರು ಜಲ ಕೃಷಿ ಮಾಸಿಕ ಸಭೆಗಳು (ಎಂಎಂಆರ್) ಸಂಶೋಧನೆ ಮತ್ತು ಗಣಕ ಯಂತ್ರಗಳಿಗೆ ಸಂಬಂಧಪಟ್ಟ ವಿಷಯಗಳು.<br>4) ನಬಾರ್ಡ್ ನೆರವಿನ ಗ್ರಾಮೀಣ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಯೋಜನೆ.<br>5) ಶಿಸ್ತು ಪ್ರಕರಣ, ಸಂಬಂಧಿಸಿದ ನ್ಯಾಯಾಲಯದ ಮೊಕದ್ದಮೆಗಳು.<br>6) ಗಿರಿಜನ ಉಪಯೋಜನೆ ಮತ್ತು ವಿಶೇಷ ಘಟಕ ಯೋಜನೆ. |
| ಮೀನುಗಾರಿಕೆ ಜಂಟಿ ನಿರ್ದೇಶಕರು (ಒಳನಾಡು) | 1) ಕೆರೆ ಮತ್ತು ಜಲಾಶಯಗಳ ಪಾಶುವಾರು ಹಕ್ಕಿನ ವಿಲೇವಾರಿ ಹಾಗೂ ಅವುಗಳ ಅಭಿವೃದ್ಧಿ, ಮೀನು ಮರಿ ಉತ್ಪಾದನೆ ಮತ್ತು ವಿತರಣೆ, ಮೀನು ಮರಿ ಕೇಂದ್ರಗಳ ನಿರ್ವಹಣೆಗೆ ಸಂಬಂಧಪಟ್ಟ ವಿಷಯಗಳು.<br>2) ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ವಿವಿಧ ಯೋಜನೆಗಳ ಅನುಷ್ಠಾನ, ಜಲಾಶಯಗಳ ಅಭಿವೃದ್ಧಿ<br>3) ಇಲಾಖೆಯ ಅಧಿಕಾರಿಗಳು/ ನೌಕರರಿಗೆ ಸಂಬಂಧಿಸಿದ ಸೇವಾ ವಿಚಾರಗಳು, ಲೆಕ್ಕ ವಿಭಾಗಕ್ಕೆ ಮತ್ತು ಮುಂಗಡಕ್ಕೆ ಸಂಬಂಧಪಟ್ಟ ವಿಷಯಗಳು.<br>4) ತಪಾಸಣೆ ಮತ್ತು ಆಡಿಟ್ ವರದಿಗಳು, ತರಬೇತಿಗೆ ಸಂಬಂಧಪಟ್ಟ ವಿಷಯಗಳು.<br>5) ಸಹಕಾರಿ ಸಂಘ ಹಾಗೂ ಫೆಡರೇಶನ್‌ಗಳ ಕಾರ್ಯ ಚಟುವಟಿಕೆಗಳು.<br>6) ಇಲಾಖಾ ವಾಹನಗಳ ನಿರ್ವಹಣೆ ಹಾಗೂ ದುರಸ್ತಿ<br>7) ಮೀನುಕೃಷಿಕರ ಅಭಿವೃದ್ಧಿ ಸಂಸ್ಥೆಗಳ ಚಟುವಟಿಕೆಗಳು<br>8) ಸಾರ್ವಜನಿಕ ಕುಂದುಕೊರತೆ<br>9) ಸಂಕಷ್ಟ ಪರಿಹಾರ ನಿಧಿ, ಮೀನುಗಾರರ ಸಾಮೂಹಿಕ ವಿಮೆ. |
| ಮೀನುಗಾರಿಕೆ ಉಪ ನಿರ್ದೇಶಕರು (ಕರಾವಳಿ) | 1) ಕರಾವಳಿ ಮೀನುಗಾರಿಕೆ ಅಭಿವೃದ್ಧಿಗೆ ಸಂಬಂಧಪಟ್ಟ ಕಾರ್ಯಕ್ರಮಗಳ ಅನುಷ್ಠಾನ, ಕೇಂದ್ರ ಪುರಸ್ಕೃತ ಮೀನುಗಾರರ ವಸತಿ ಯೋಜನೆ, ಮತ್ಸ್ಯಾಶ್ರಯ ಯೋಜನೆ.<br>2) ಮೀನುಗಾರಿಕೆ ಬಂದರು/ ಇಳಿದಾಣಗಳ ನಿರ್ಮಾಣ ಮತ್ತು ನಿರ್ವಹಣೆ, ಮೀನುಗಾರಿಕೆ ದೋಣಿಗಳಿಗೆ ಮಾರಾಟ ಕರ ರಹಿತ ಡೀಸಲ್ ಸರಬರಾಜು, ಹಾಗೂ ನಾಡ ದೋಣಿಗಳ ಮೋಟಾರೀಕರಣ ಯೋಜನೆ.<br>3) ಪ್ರದೇಶಾಭಿವೃದ್ಧಿ ಯೋಜನೆಗಳು, ಕಟ್ಟಡಗಳಿಗೆ ಸಂಬಂಧಪಟ್ಟ ವಿಷಯಗಳು. |

| | |
|---|---|
| ಮೀನುಗಾರಿಕೆ ಉಪ ನಿರ್ದೇಶಕರು (ಸಾಂಖ್ಯಿಕ) | 1) ಮೀನುಗಾರಿಕೆ ಅಂಕಿ-ಅಂಶಗಳಿಗೆ ಸಂಬಂಧಪಟ್ಟ ವಿಷಯಗಳು, ವಾರ್ಷಿಕ ಆಡಳಿತಾತ್ಮಕ ವರದಿ ತಯಾರಿಕೆ.<br>2) ಎಂ.ಎಂ.ಆರ್. ಕೆ.ಡಿ.ಪಿ. ಮುಂತಾದ ಸಭೆಗಳಿಗೆ ವಿಷಯಗಳ ತಯಾರಿಕೆ.<br>3) ನಬಾರ್ಡ್ ನೆರವಿನ ಗ್ರಾಮೀಣ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಯೋಜನೆ.<br>4) ಪ್ರದರ್ಶನಗಳಿಗೆ ಸಂಬಂಧಪಟ್ಟ ವಿಷಯಗಳ ನಿರ್ವಹಣೆ<br>5) ಶಿಸ್ತು ಪ್ರಕರಣ ಸಂಬಂಧಿಸಿದ ನ್ಯಾಯಾಲಯ ಮೊಕದ್ದಮೆಗಳು |
| ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) | 1) ಇಲಾಖೆಯ ಸಿಬ್ಬಂದಿಯ ಸೇವಾ ವಿಷಯಗಳು, ಆಡಳಿತ ವಿಷಯಕ್ಕೆ ಸಂಬಂಧಪಟ್ಟ ನ್ಯಾಯಾಲಯಗಳಲ್ಲಿನ ಮೊಕದ್ದಮೆಗಳು ಶಿಸ್ತು ಕ್ರಮಗಳು, ಆಸ್ತಿ ಮತ್ತು ಋಣಪಟ್ಟಿ, ಸಿಬ್ಬಂದಿಯ ಕಾರ್ಯನಿರ್ವಹಣಾ ವರದಿ, ರಜೆಗೆ ಸಂಬಂಧಪಟ್ಟ ವಿಷಯಗಳು, ನೌಕರರ ನೇಮಕಾತಿ, ಬಡ್ತಿ ವರ್ಗಾವಣೆ ಜೇಷ್ಠತಾ ಪಟ್ಟಿ ವೇತನ ನಿಗದಿ ಮುಂತಾದ ವಿಷಯಗಳು.<br>2) ಲೆಕ್ಕ ವಿಭಾಗ, ಮುಂಗಡಗಳು, ನಗದು ಪುಸ್ತಕ ನಿರ್ವಹಣೆ ಮಾಸಿಕ ಆದಾಯ, ವೆಚ್ಚ ಪಟ್ಟಿ ತಯಾರಿಕೆ ಮುಂತಾದ ವಿಷಯಗಳು.<br>3) ಸಾರ್ವಜನಿಕ ಕುಂದು ಕೊರತೆಗೆ ಸಂಬಂಧಿಸಿದ ವಿಷಯಗಳು.<br>4) ತಪಾಸಣೆ ಮತ್ತು ಆಡಿಟ್ ವರದಿಗೆ ಸಂಬಂಧಿಸಿದ ವಿಷಯಗಳು, ಕಛೇರಿ ಕಾಗದ ಪತ್ರಗಳಿಗೆ ಸಂಬಂಧಪಟ್ಟಂತೆ ಕಡತಗಳ ಚಲನವಲನ. |
| ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ವಿಸ್ತರಣೆ) | 1) ಪಂಚವಾರ್ಷಿಕ ಯೋಜನೆ, ವಾರ್ಷಿಕ ಯೋಜನೆ ವಾರ್ಷಿಕ ವರದಿ ಮುಂತಾದ ವಿಷಯಗಳು<br>2) ಮೀನುಗಾರಿಕೆ ಕಾಯಿದೆ ನಿಯಮಗಳಿಗೆ ಸಂಬಂಧಪಟ್ಟ ವಿಷಯಗಳು.<br>3) ಹಿನ್ನೀರು ಮೀನುಗಾರಿಕೆ. ಜಲ ಕೃಷಿ, ಮಾರುಕಟ್ಟೆಗೆ ಸಂಬಂಧಪಟ್ಟ ವಿಷಯಗಳು ಮತ್ತು ಸರ್ಕಾರದ ವಿವಿಧ ಸಭೆಗಳಿಗೆ ಟಿಪ್ಪಣಿ ತಯಾರಿಸುವುದು. |
| ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ಮಾರುಕಟ್ಟೆ) | 1) ಕೆರೆ, ನದಿ ಮತ್ತು ಜಲಾಶಯ ಮೀನು ಪಾಶುವಾರು ಹಕ್ಕಿನ ವಿಲೇವಾರಿ ಹಾಗೂ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿನ ಮೊಕದ್ದಮೆಗಳು. |
| ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ವಾರ್ತಾ ಮತ್ತು ಶಿಕ್ಷಣ) | 1) ಮೀನುಮರಿ ಕೇಂದ್ರಗಳ ನಿರ್ವಹಣೆ ಮತ್ತು ಮೀನುಮರಿ ಉತ್ಪಾದನೆ, ಪಾಲನೆಗೆ ಸಂಬಂಧಿಸಿದ ವಿಷಯಗಳು.<br>2) ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳ ಕಾರ್ಯ ಚಟುವಟಿಕೆಗಳ ಪ್ರಗತಿ ಪರಿಶೀಲನೆ ಹಾಗೂ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.<br>3) ಇಲಾಖಾ ವಾಹನಗಳ ನಿರ್ವಹಣೆಗೆ ಮತ್ತು ಮತ್ಸ್ಯಾಲಯಕ್ಕೆ ಸಂಬಂಧಪಟ್ಟ ವಿಷಯಗಳು<br>4) ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಯೋಜನೆಗಳ ಅನುಷ್ಠಾನ. |
| ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) (ವಿಶೇಷ ಘಟಕ ಯೋಜನೆ) | 1) ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ<br>2) ಮಂಜುಗಡ್ಡೆ ಹಾಗೂ ಮೀನು ಸಂಸ್ಕರಣೆ<br>3) ತರಬೇತಿ ಹಾಗೂ ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮ ಮತ್ತು ಒಳನಾಡು ಮೀನುಗಾರಿಕೆ ಅಭಿವೃದ್ಧಿ ನಿಗಮಕ್ಕೆ ಸಂಬಂಧಪಟ್ಟ ವಿಷಯಗಳು.<br>4) ಮೀನುಗಾರರ ಸಾಮೂಹಿಕ ಅಪಘಾತ ವಿಮಾಯೋಜನೆ, ಮೀನುಗಾರರ ಸಂಕಷ್ಟ ಪರಿಹಾರ ನಿಧಿ ಮತ್ತ ಗ್ರಂಥಾಲಯಕ್ಕೆ ಸಂಬಂಧಪಟ್ಟ ವಿಷಯಗಳು |

| | |
|---|---|
| ಸಹಕಾರ ಸಂಘಗಳ ಸಹಾಯಕ ನಿಬಂಧಕರು | 1) ಮೀನುಗಾರರ ಸಹಕಾರ ಸಂಘಗಳಿಗೆ ಮತ್ತು ಮೀನುಗಾರಿಕೆ ಸಹಕಾರ ಮಹಾ ಮಂಡಳಿಗಳಿಗೆ ಸಂಬಂಧಪಟ್ಟ ವಿಷಯಗಳು ಹಾಗೂ ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ನಿಗಮದ ನೆರವಿನ ಸಮಗ್ರ ಮೀನುಗಾರಿಕೆ ಯೋಜನೆಗಳ ಪ್ರಗತಿ ಪರಿಶೀಲನೆ ಮತ್ತು ಪ್ರಗತಿ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.<br>2) ಸಾಲ ವಸೂಲಿ ಬಗ್ಗೆ ಪ್ರಗತಿ ಪರಿಶೀಲನೆ ಹಾಗೂ (ಡಿ.ಸಿ.ಬಿ) ಬೇಡಿಕೆ ವಸೂಲಾತಿ ಮತ್ತು ಬಾಕಿ ತಃಖ್ತೆ ತಯಾರಿಕೆ ಹಾಗೂ ಸಾಲ ವಸೂಲಾತಿ ಬಗ್ಗೆ ಕ್ರಮ ವಹಿಸುವುದು. |
| ಸಹಾಯಕ ನಿರ್ದೇಶಕರು (ಅಂಕಿ ಅಂಶಗಳು) | 1) ಮೀನುಗಾರಿಕೆಗೆ ಸಂಬಂಧಪಟ್ಟಂತೆ ಅಂಕಿ ಅಂಶಗಳನ್ನು ಶೇಖರಿಸಿ, ಅಂಕಿ ಅಂಶಗಳ ಪುಸ್ತಕವನ್ನು ತಯಾರಿಸುವುದು.<br>2) ಇಲಾಖೆಯ ವಾರ್ಷಿಕ, ಆಡಳಿತಾತ್ಮಕ ವರದಿ ತಯಾರಿಕೆ ಮೀನುಗಾರಿಕೆಯ ಆರ್ಥಿಕ ಸ್ಥಿತಿ ಬಗ್ಗೆ ವರದಿ ತಯಾರಿಕೆ ಮುಂತಾದ ವಿಷಯಗಳು. |
| ಸಹಾಯಕ ಕಾರ್ಯಪಾಲಕ ಅಭಿಯಂತರರು | 1) ಇಲಾಖೆ ಕಾಮಗಾರಿಗಳಿಗೆ ಸಂಬಂಧಪಟ್ಟ ವಿಷಯಗಳು<br>2) ಮೀನುಮರಿ ಉತ್ಪಾದನಾ, ಪಾಲನಾ ಕೇಂದ್ರಗಳಲ್ಲಿ ಕೊಳಗಳ ನಿರ್ಮಾಣ ಮತ್ತು ದುರಸ್ತಿ ಕಾಮಗಾರಿಗಳನ್ನು ನಿರ್ವಹಿಸುವುದು.<br>ಜಲ ಕೃಷಿಗೆ ಸಂಬಂಧಪಟ್ಟಂತೆ ಹಿನ್ನೀರು ಪ್ರದೇಶಗಳನ್ನು ಭೂಮಾಪನ (ಸರ್ವೆ) ಮಾಡಿ ಜಲ ಕೃಷಿಗೆ ಕೊಳಗಳನ್ನು ನಿರ್ಮಿಸಲು ನಕ್ಷೆ ಮತ್ತು ಅಂದಾಜುಗಳನ್ನು ತಯಾರಿಸುವುದು. |

ಮೇಲೆ ವಿವರಿಸಿದಂತೆ ನಿರ್ದೇಶನಾಲಯದಲ್ಲಿನ ವಿವಿಧ ಶಾಖೆಗಳ ಮುಖಾಂತರ ರಾಜ್ಯದಲ್ಲಿನ ಮೀನುಗಾರಿಕೆ ಅಭಿವೃದ್ಧಿ ವಿಷಯಗಳನ್ನು ನಿರ್ವಹಿಸಲಾಗುತ್ತಿದೆ.

**ಅಧಿಕಾರಿಗಳ/ ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು:**

ತ್ವರಿತಗತಿಯಲ್ಲಿ ಇಲಾಖೆಯಲ್ಲಿನ ಕಾರ್ಯನಿರ್ವಹಣೆಗಾಗಿ ನಿರ್ದೇಶನಾಲಯದ ಆದೇಶ ಸಂಖ್ಯೆ: ಎಡಿಎಂ (1) 22/ 2002-2003 ದಿನಾಂಕ: 13.11.2002ರ ಆದೇಶದಲ್ಲಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿಷಯ ನಿರ್ವಾಹಕರುಗಳು ನಿರ್ವಹಿಸಬೇಕಾದ ಸಂಕಲನಗಳ ವಿವರ ಹಾಗೂ ಅವುಗಳ ಮೇಲ್ವಿಚಾರಣೆ ಮಾಡುವ ಅಧೀಕ್ಷಕರುಗಳು. ಮೀನುಗಾರಿಕೆ ಸಹಾಯಕ ನಿರ್ದೇಶಕರುಗಳು ಮತ್ತು ಅಧಿಕಾರಿಗಳ ವಿವರಣಾ ಪಟ್ಟಿಯನ್ನು ಹೊರಡಿಸಲಾಗಿದೆ.

ನಿರ್ದೇಶನಾಲಯವು ನಿರ್ದೇಶಕರ ಮೇಲ್ವಿಚಾರಣೆಯಲ್ಲಿದ್ದು ಅವರ ಅಧೀನದಲ್ಲಿ ಇಬ್ಬರು ಜಂಟಿ ನಿರ್ದೇಶಕರು ಇಬ್ಬರು ಉಪನಿರ್ದೇಶಕರು, ಒಬ್ಬರು ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು (ಆಡಳಿತ) ನಾಲ್ಕು ಜನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-1) ಹಾಗೂ ಆರು ಜನ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಕಾರ್ಯನಿರ್ವಹಿಸುತ್ತಿದ್ದಾರೆ.

ನಿರ್ದೇಶನಾಲಯದಲ್ಲಿ ಆರು ಕಛೇರಿ ಅಧೀಕ್ಷಕರು, ಹತ್ತೊಂಬತ್ತು ಪ್ರಥಮ ದರ್ಜೆ ಸಹಾಯಕರು ಮತ್ತು ಹದಿನಾಲ್ಕು ಜನ ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು, ಇವರು ಸರ್ಕಾರಿ ಆಡಳಿತ ನಿಯಮಾವಳಿಯಂತೆ ನಿರ್ದೇಶನಾಲಯದ ದೈನಂದಿನ ಪತ್ರವ್ಯವಹಾರ ಹಾಗೂ ಆಡಳಿತ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಾರೆ.

**ಮಾಹಿತಿಯನ್ನು ಪಡೆಯಲು ನಾಗರೀಕರಿಗೆ ನೀಡಲಾಗುವ ಅನುಕೂಲತೆಯ ವಿವರ:**

ಇಲಾಖೆಯಿಂದ ಹೊರಡಿಸಲಾಗುವ ಪ್ರಮುಖ ಪ್ರಕಟಣೆ ಹಾಗೂ ಆದೇಶಗಳ ಪ್ರತಿಗಳನ್ನು ಇಲಾಖಾ ಪ್ರಕಟಣಾ ಫಲಕದಲ್ಲಿ ಸಾರ್ವಜನಿಕರ ಮಾಹಿತಿಗಾಗಿ ಪ್ರದರ್ಶಿಸಲಾಗುತ್ತದೆ. ಅವುಗಳ ಪ್ರತಿಗಳನ್ನು ಸಂಬಂಧಪಟ್ಟ ಅಧೀನಾಧಿಕಾರಿಗಳಿಗೆ ಕಳುಹಿಸಿ ಅವರ ಕಛೇರಿಯ ಪ್ರಕಟಣಾ ಫಲಕದಲ್ಲಿ ಪ್ರಕಟಿಸಲು ಎಲ್ಲಾ ಅಧೀನಾಧಿಕಾರಿಗಳಿಗೆ ಸೂಚನೆಯನ್ನು ನೀಡಲಾಗಿದೆ.

ನಿರ್ದೇಶನಾಲಯದಲ್ಲಿ ಜಂಟಿ ನಿರ್ದೇಶಕರು (ಒಳನಾಡು)ರವರು ಸಾರ್ವಜನಿಕ ಕುಂದು ಕೊರತೆ ಸಂಪರ್ಕಾಧಿಕಾರಿಯಾಗಿದ್ದು, ಹೆಚ್ಚಿನ ವಿವರಗಳಿಗೆ ಅವರನ್ನು ಸಂಪರ್ಕಿಸಬಹುದಾಗಿದೆ. ದೂರವಾಣಿ ಸಂಖ್ಯೆ ಹಾಗೂ ವಿಳಾಸ ಈ ಕೆಳಕಂಡಂತಿದೆ.

ಜಂಟಿ ನಿರ್ದೇಶಕರು (ಒಳನಾಡು)
ನಂ. 8, ಮಹಾವೀರ ಕಾಂಪ್ಲೆಕ್ಸ್,
5ನೇ ಮಹಡಿ, ಕೆ. ಜಿ. ರಸ್ತೆ,
ಬೆಂಗಳೂರು-9
ದೂರವಾಣಿ 2263280.

ಮೀನುಗಾರಿಕೆಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಮಾಹಿತಿಯನ್ನು ನಿರ್ದೇಶನಾಲಯದ ಅಧೀನಾಧಿಕಾರಿಗಳಿಂದ, ಮೀನುಗಾರಿಕೆ ಉಪನಿರ್ದೇಶಕರು ಮತ್ತು ಜಿಲ್ಲಾ ಮೀನುಗಾರಿಕೆ ಅಧಿಕಾರಿಗಳು ಹಾಗೂ ತಾಲ್ಲೂಕು ಮಟ್ಟದ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ರವರಿಂದ ಸಾರ್ವಜನಿಕರು ಪಡೆಯಬಹುದಾಗಿದೆ.

ಪಿ.ಆರ್.1041 ಮೀನುಗಾರಿಕೆ ನಿರ್ದೇಶಕರು.

## ಪೊಲೀಸ್ ಇಲಾಖೆ

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಾರ್ಯಾಲಯ, ಕರ್ನಾಟಕ ರಾಜ್ಯ, ನೃಪತುಂಗ ರಸ್ತೆ, ಬೆಂಗಳೂರು-560 002

## ಅಧಿಸೂಚನೆ

**ಸಂಖ್ಯೆ: ಕಾನೂನು: (1): 75: 2002 ದಿನಾಂಕ: 4ನೇ ಸೆಪ್ಟೆಂಬರ್ 2003**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000ದ ಸೆಕ್ಷನ್ 3 (ಬಿ) (i) ಮತ್ತು (ii) ರ ಪ್ರಕಾರ ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ ನಿಯಮ 3ರ ಅಡಿಯಲ್ಲಿ ಪೊಲೀಸ್ ಇಲಾಖೆಗೆ ಸಂಬಂಧಪಟ್ಟ ಕ್ರಿಯೆ ಹಾಗೂ ಕರ್ತವ್ಯಗಳನ್ನು ಈ ಅಧಿಸೂಚನೆಗೆ ಲಗತ್ತಾಗಿರುವ ಮಾಹಿತಿಯನ್ನು ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್
ಆಫ್ ಪೊಲೀಸ್ ರವರ ಪರವಾಗಿ

ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ದ ಸೆಕ್ಷನ್ 3(ಬಿ) (i) ಮತ್ತು (ii) ನಿಯಮ 3ರಡಿ ಪೊಲೀಸ್ ಇಲಾಖೆಯ ಕ್ರಿಯೆ ಮತ್ತು ಕರ್ತವ್ಯಗಳನ್ನು ಈ ಕೆಳಕಂಡಂತೆ ಪ್ರಕಟಿಸಿದೆ.

**ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರ:**

ಪೊಲೀಸ್ ಇಲಾಖೆಯ ಮೂಲ ಕರ್ತವ್ಯಗಳೆಂದರೆ, ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವುದು, ಅಪರಾಧಗಳ ತಡೆ ಮತ್ತು ಪತ್ತೆ, ಸಂಚಾರ ವ್ಯವಸ್ಥೆಯ ನಿರ್ವಹಣೆ ಹಾಗೂ ವಿವಿಧ ಕಾನೂನುಗಳ ಮತ್ತು ಕಾಯ್ದೆಗಳ ಜಾರಿಪಡಿಸುವುದು.

ರಾಜ್ಯ ಗೃಹ ಸಚಿವಾಲಯದ ಅಧೀನದಲ್ಲಿರುವ ಕರ್ನಾಟಕ ರಾಜ್ಯ ಪೊಲೀಸ್ ದಳಕ್ಕೆ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರು ಮುಖ್ಯಸ್ಥರಾಗಿರುತ್ತಾರೆ. ಅವರ ಕರ್ತವ್ಯ ನಿರ್ವಹಣೆಗೆ ಆಡಳಿತ ವ್ಯವಸ್ಥೆಯಲ್ಲಿ ಕೇಂದ್ರ ಸ್ಥಾನದ ಸಿಬ್ಬಂದಿ, ಅಧಿಕಾರಿಗಳು, ವಿಶೇಷ ಘಟಕಾಧಿಕಾರಿಗಳು ಮತ್ತು ಇತರ ಅಧಿಕಾರಿಗಳು ನೆರವಾಗುತ್ತಾರೆ. ಜಿಲ್ಲಾ ಪೊಲೀಸ್ ಆಡಳಿತಕ್ಕೆ ಪೊಲೀಸ್ ಅಧೀಕ್ಷಕರ ಮಟ್ಟದ ಅಧಿಕಾರಿಯು ಮುಖ್ಯಸ್ಥರಾಗಿರುತ್ತಾರೆ. ಕರ್ನಾಟಕ ರಾಜ್ಯದ ಜಿಲ್ಲೆಗಳನ್ನು ಆರು ವಲಯಗಳನ್ನಾಗಿ ವಿಂಗಡಿಸಿದ್ದು ಪ್ರತಿ ವಲಯಕ್ಕೆ ಪೊಲೀಸ್ ಮಹಾ ನಿರೀಕ್ಷಕರ ಮಟ್ಟದ ಅಧಿಕಾರಿ ಮುಖ್ಯಸ್ಥರಿರುತ್ತಾರೆ. ಬೆಂಗಳೂರು ನಗರ ಪೊಲೀಸ್‌ನ ಆಡಳಿತಕ್ಕೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಮಟ್ಟದ ಅಧಿಕಾರಿಯಾದ ಪೊಲೀಸ್ ಆಯುಕ್ತರು, ಉಪ ಪೊಲೀಸ್ ಮಹಾ ನಿರೀಕ್ಷಕರ ಮಟ್ಟದ ಪೊಲೀಸ್ ಆಯುಕ್ತರು ಹುಬ್ಬಳ್ಳಿ-ಧಾರವಾಡ ಮತ್ತು ಮೈಸೂರು ನಗರದ ಪೊಲೀಸ್ ಆಡಳಿತಕ್ಕೆ ಮುಖ್ಯಸ್ಥರಿರುತ್ತಾರೆ. ಈ ಎಲ್ಲಾ ಅಧಿಕಾರಿಗಳು ಕರ್ನಾಟಕದ ಆರಕ್ಷಕ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರ ಅಧೀನಕ್ಕೆ ಒಳಪಡುತ್ತಾರೆ.

| | | |
|---|---|---|
| 1) | ಡಿಜಿ ಮತ್ತು ಐಜಿಪಿ | ರಾಜ್ಯ ಪೊಲೀಸ್ ಇಲಾಖೆಗೆ ಸಂಬಂಧಿಸಿದ ಎಲ್ಲಾ ವಿಷಯಗಳು. |
| 2) | ಡಿಜಿಪಿ ಸಿಓಡಿ | ಸಿಓಡಿ ಘಟಕದ ಎಲ್ಲಾ ವಿಷಯಗಳು |
| 3) | ಎಡಿಜಿಪಿ (ಆಡಳಿತ) | ಪೊಲೀಸ್ ಇಲಾಖೆಯ ಎಲ್ಲಾ ಆಡಳಿತ ವಿಷಯಗಳು (ವರ್ಗಾವಣೆ, ಮುಂಬಡ್ತಿ, ಇಲಾಖಾ ವಿಚಾರಣೆಗಳು, ವೇತನ ಇತ್ಯಾದಿ). |
| 4) | ಪೊಲೀಸ್ ಕಮೀಷನರ್, ಬೆಂಗಳೂರು ನಗರ. | ಬೆಂಗಳೂರು ನಗರ ಪೊಲೀಸಿಗೆ ಸಂಬಂಧಪಟ್ಟ ವಿಷಯಗಳು. |
| 5) | ಎಡಿಜಿಪಿ (ಕಾ ಮತ್ತು ಸು) | ಬೆಂಗಳೂರು ನಗರ ಹೊರತುಪಡಿಸಿ ರಾಜ್ಯದಲ್ಲಿನ ಕಾನೂನು ಮತ್ತು ಸುವ್ಯವಸ್ಥೆಗೆ ಸಂಬಂಧಿಸಿದ ವಿಷಯಗಳು |
| 6) | ಎಡಿಜಿಪಿ (ಅಪರಾಧ ಮತ್ತು ಸೇವೆಗಳು) | ಅಪರಾಧ ಮತ್ತು ತಾಂತ್ರಿಕರಣಕ್ಕೆ ಸಂಬಂಧಿಸಿದ ವಿಷಯಗಳು |
| 7) | ಎಡಿಜಿಪಿ ರಾಜ್ಯ ಗುಪ್ತವಾರ್ತೆ | ರಾಜ್ಯ ಗುಪ್ತವಾರ್ತೆಗೆ ಸಂಬಂಧಿಸಿದ ವಿಷಯಗಳು |
| 8) | ಎಡಿಜಿಪಿ ಟಿ.ಟಿ.ಎಂ | ಟೆಲಿಕಮ್ಯೂನಿಕೇಷನ್ ಮತ್ತು ಆಧುನೀಕರಣಕ್ಕೆ ಸಂಬಂಧಿಸಿದ ವಿಷಯಗಳು |
| 9) | ಎಡಿಜಿಪಿ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ | ನಾಗರೀಕ ಹಕ್ಕುಗಳಿಗೆ ಸಂಬಂಧಿಸಿದ ವಿಷಯಗಳು |
| 10) | ಎಡಿಜಿಪಿ/ಐಜಿಪಿ ರೈಲ್ವೇಸ್ | ರೈಲ್ವೆ ಪೊಲೀಸ್ ಘಟಕಕ್ಕೆ ಸಂಬಂಧಿಸಿದ ವಿಷಯಗಳು |
| 11) | ಎಡಿಜಿಪಿ ಕೆ.ಎಸ್.ಆರ್.ಪಿ | ಕೆ.ಎಸ್.ಆರ್.ಪಿ.ಗೆ ಸಂಬಂಧಿಸಿದ ವಿಷಯಗಳು |
| 12) | ವಲಯ ಐಜಿಪಿಗಳು | ಸಂಬಂಧಪಟ್ಟ ವಲಯಕ್ಕೆ ಸಂಬಂಧಿಸಿದ ವಿಷಯಗಳು |
| 13) | ಐಜಿಪಿ ಸಿ.ಎಸ್.ಪಿ | ಕಡಲತೀರ ಪೊಲೀಸ್ ಪಡೆಗೆ ಸಂಬಂಧಿಸಿದ ವಿಷಯಗಳು |
| 14) | ಪೊಲೀಸ್ ಕಮೀಷನರ್‌ಗಳು ಮೈಸೂರು ನಗರ ಮತ್ತು ಹುಬ್ಬಳ್ಳಿ-ಧಾರವಾಡ ನಗರ. | ಸಂಬಂಧಪಟ್ಟ ನಗರಕ್ಕೆ ಸಂಬಂಧಿಸಿದ ವಿಷಯಗಳು |
| 15) | ಜಿಲ್ಲಾ ಎಸ್. ಪಿ.ಗಳು (ಕೆ. ಜಿ.ಎಫ್ ಮತ್ತು ರೈಲ್ವೇಸ್ ಸೇರಿದಂತೆ) | ಸಂಬಂಧಪಟ್ಟ ಜಿಲ್ಲೆಗೆ ಸಂಬಂಧಿಸಿದ ವಿಷಯಗಳು. |
| 16) | ಪೊಲೀಸ್ ಉಪ ಅಧೀಕ್ಷಕರು | ಸಂಬಂಧಪಟ್ಟ ಉಪ ವಿಭಾಗಕ್ಕೆ ಸಂಬಂಧಿಸಿದ ವಿಷಯಗಳು |
| 17) | ವೃತ್ತ ಪೊಲೀಸ್ ಇನ್ಸ್‌ಪೆಕ್ಟರ್ | ಸಂಬಂಧಪಟ್ಟ ವೃತ್ತಕ್ಕೆ ಸಂಬಂಧಿಸಿದ ವಿಷಯಗಳು |

| | | |
|---|---|---|
| 18) | ಪೊಲೀಸ್ ಠಾಣೆಯ ಠಾಣಾಧಿಕಾರಿಯಾದ ಪೊಲೀಸ್ ಉಪ ನಿರೀಕ್ಷಕರು/ ಪೊಲೀಸ್ ನಿರೀಕ್ಷಕರು | ಸಂಬಂಧಪಟ್ಟ ಠಾಣೆಗೆ ಸಂಬಂಧಿಸಿದ ವಿಷಯಗಳು |
| 19) | ಪೊಲೀಸ್ ಹೊರ ಠಾಣೆಯ ಠಾಣಾಧಿಕಾರಿ | ಸಂಬಂಧಪಟ್ಟ ಹೊರಠಾಣೆಗೆ ಸಂಬಂಧಿಸಿದ ವಿಷಯಗಳು |

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್
ಆಫ್ ಪೊಲೀಸ್ ರವರ ಪರವಾಗಿ

ಪಿ.ಆರ್. 1042

## ಪೊಲೀಸ್ ಇಲಾಖೆ

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಕಾರ್ಯಾಲಯ, ಕರ್ನಾಟಕ ರಾಜ್ಯ, ನೃಪತುಂಗ ರಸ್ತೆ, ಬೆಂಗಳೂರು-560 002

### ಅಧಿಸೂಚನೆ ಸಂಖ್ಯೆ: ಕಾನೂನು: (1): 75: 2002 ದಿನಾಂಕ: 4ನೇ ಸೆಪ್ಟೆಂಬರ್ 2003

ಪೊಲೀಸ್ ಇಲಾಖೆಯ ಅಧಿಸೂಚನೆ ಸಂಖ್ಯೆ: ಕಾನೂನು(1) 75/2002 ದಿನಾಂಕ: 10.03.2003 ಅನ್ನು ರದ್ದು ಪಡಿಸಿ ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ದ ಪ್ರಕರಣ 2ರ ಅನ್ವಯ ಪೊಲೀಸ್ ಇಲಾಖೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| ಸಾರ್ವಜನಿಕ ಪ್ರಾಧಿಕಾರಿ | ಶಾಖೆ | ಸಕ್ಷಮ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರ |
|---|---|---|---|
| ಪೊಲೀಸ್ ಕೇಂದ್ರ ಸ್ಥಾನ, ಬೆಂಗಳೂರು | ಸಿಬಿ, ಶಾಖೆ, ಎನ್‌ಜಿಓ, ಶಾಖೆ, ಎಂ.ಟಿ. ಶಾಖೆ, ರಾಜ್ಯ ಸಿಬ್ಬಂದಿ ಶಾಖೆ, ಸಿಬ್ಬಂದಿ ಶಾಖೆ ಸಂಗ್ರಹ-1, ಸಂಗ್ರಹ-2, ಲೇಖನ ಸಾಮಗ್ರಿಗಳ ಶಾಖೆ, ಸ್ವೀಕೃತಿ ಮತ್ತು ರವಾನೆ ಶಾಖೆ, ಅಪೀಲು ಶಾಖೆ, ದಾಖಲಾತಿ ಶಾಖೆ, ನಗದು ಶಾಖೆ, ಪಿಆರ್‌ಎಸ್, ಪಿಆರ್‌ಸಿ ಆಯವ್ಯಯ ಶಾಖೆ ನಿಧಿ ಮತ್ತು ವಿಶ್ರಾಂತಿ ವೇತನ ಶಾಖೆ, ಲೆಕ್ಕ ಶಾಖೆ, ಲೆಕ್ಕ ಪರಿಶೋಧನ ದಳ ಆರ್‌ಎಲ್‌ಎನ್ ಶಾಖೆ, ಕಟ್ಟಡ ಶಾಖೆ, ಎನ್‌ಹೆಚ್‌ಆರ್‌ಸಿ ಪೊಲೀಸ್ ಪ್ರಿಂಟಿಂಗ್ ಪ್ರೆಸ್ ಸಂಖ್ಯಾ ಶಾಸ್ತ್ರ ಶಾಖೆ, ಸಿಟಿಆರ್‌ಎಸ್, ಪಿಆರ್‌ಓ, ಎಸ್‌ಜಿಓ ಶಾಖೆ | ಎಡಿಜಿಪಿ (ಆಡಳಿತ) | ಡಿಜಿ ಮತ್ತು ಐಜಿಪಿ |
| | ಕಾನೂನು ಮತ್ತು ಸುವ್ಯವಸ್ಥೆ | ಎಡಿಜಿಪಿ ಕಾ ಮತ್ತು ಸು | ಡಿಜಿ ಮತ್ತು ಐಜಿಪಿ |
| | ಅಪರಾಧ ಮತ್ತು ತಾಂತ್ರಿಕ ಸೇವೆಗಳು ಗಣಕ ವಿಭಾಗ ಎಸ್‌ಸಿಆರ್‌ಬಿ, ಶ್ವಾನದಳ, ಬೆರಳು ಮುದ್ರ ಸಂಗ್ರಹಾಲಯ ವಿಧಿವಿಜ್ಞಾನ ಪ್ರಯೋಗಾಲಯ | ಎಡಿಜಿಪಿ ಅಪರಾಧ ಮತ್ತು ತಾಂತ್ರಿಕ ಸೇವೆಗಳು | ಡಿಜಿ ಮತ್ತು ಐಜಿಪಿ |
| | ದೂರ ಸಂಪರ್ಕ ಸಾರಿಗೆ ಮತ್ತು ಆಧುನೀಕರಣ | ಎಡಿಜಿಪಿ ಟಿಟಿಎಂ | ಡಿಜಿ ಮತ್ತು ಐಜಿಪಿ |
| ಕಾರ್ಪ್ಸ್ ಆಫ್ ಡಿಟೆಕ್ಟೀವ್ಸ್ ನೇಮಕಾತಿ, ತರಬೇತಿ ಮತ್ತು ವಿಶೇಷ ಘಟಕಗಳು | ಸಿ.ಓ.ಡಿ., ಆರ್ಥಿಕ ಅಪರಾಧಗಳು, ವಿಶೇಷ ಘಟಕಗಳು ಎಫ್‌ಎಸ್, ಎಡಿಸಿ, ಸಿಎಎಸ್, ಎಡಿಎಸ್, ಹೆಚ್ ಅಂಡ್ ಬಿ, ಸೈಬರ್ ಕ್ರೈಂ, ನೇಮಕಾತಿ, ತರಬೇತಿ. ಪಿಡಿಎಂಎಸ್. | ಐಜಿಪಿ ಸಿಓಡಿ ಘಟಕ<br><br>ಎಡಿಜಿಪಿ, ನೇಮಕಾತಿ/ ತರಬೇತಿ | ಡಿಜಿಪಿ ಸಿಓಡಿ<br><br>-"- |
| | ಅರಣ್ಯ ವಿಭಾಗ, ಬೆಂಗಳೂರು.<br>ಅರಣ್ಯ ವಿಭಾಗ, ಮಡಿಕೇರಿ<br>ಆ್ಯಂಟಿ ಡಕಾಯಿತಿ ಸ್ಕ್ವಾಡ್, ಬೆಂಗಳೂರು, ಬೆಳಗಾಂ, ಗುಲ್ಬರ್ಗಾ ಮತ್ತು ಬಳ್ಳಾರಿ.<br><br>ನಾರ್ಕೋಟಿಕ್ ಡ್ರಗ್ ಸೆಲ್ ಮಂಗಳೂರು | ಡಿಐಜಿಪಿ ಅರಣ್ಯಾ<br>ಎಸ್.ಪಿ. ಅರಣ್ಯಾ<br>ಸಂಬಂಧಪಟ್ಟ ಆ್ಯಂಟಿ ಡಕಾಯತಿ ಸ್ಕ್ವಾಡ್ ಎಸ್.ಪಿ.<br>-"- | <br>ಐಜಿಪಿ ಅರಣ್ಯಾ<br>ಐಜಿಪಿ ಅರಣ್ಯಾ<br>ಐಜಿಪಿ ಸಿಓಡಿ<br>-"- |
| ರಾಜ್ಯ ಗುಪ್ತವಾರ್ತೆ | ರಾಜ್ಯ ಗುಪ್ತ ವಾರ್ತೆ ಕೇಂದ್ರಸ್ಥಾನ, ಬೆಂಗಳೂರು (ಆಡಳಿತ, ಭದ್ರತೆ, ಮತೀಯ, ರಾಜಕೀಯ),<br>ಗುಪ್ತವಾರ್ತೆ: ಬೆಂಗಳೂರು, ಮಂಗಳೂರು, ಬೆಳಗಾಂ, ಮೈಸೂರು ವಿಭಾಗಗಳು | ಐಜಿಪಿ ಗುಪ್ತವಾರ್ತೆ<br><br>ಸಂಬಂಧಪಟ್ಟ ಎಸ್.ಪಿ. | ಎಡಿಜಿಪಿ ಗುಪ್ತವಾರ್ತೆ<br>ಐಜಿಪಿ ಗುಪ್ತವಾರ್ತೆ |

| ಸಾರ್ವಜನಿಕ ಪ್ರಾಧಿಕಾರಿ | ಶಾಖೆ | ಸಕ್ಷಮ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರ |
|---|---|---|---|
| ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ | ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ಕೇಂದ್ರಸ್ಥಾನ, ಬೆಂಗಳೂರು.<br>ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯದ ವಿಭಾಗೀಯ ಕಛೇರಿ ಬೆಂಗಳೂರು, ಮೈಸೂರು, ಬೆಳಗಾಂ, ಗುಲ್ಬರ್ಗಾ, ದಾವಣಗೆರೆ ಮತ್ತು ಮಂಗಳೂರು | ಐಜಿಪಿ ಡಿಸಿಆರ್‌ಇ<br><br>ಸಂಬಂಧಪಟ್ಟ ವಿಭಾಗೀಯ ಎಸ್.ಪಿ. | ಎಡಿಜಿಪಿ ಡಿಸಿಆರ್‌ಇ<br>-“- |
| ಕರ್ನಾಟಕ ರಾಜ್ಯ ಮೀಸಲೂ ಪೊಲೀಸ್ | ಕೆ.ಎಸ್.ಆರ್.ಪಿಯ<br>01, 03, 04, 09ನೇ ಪಡೆಗಳು ಬೆಂಗಳೂರು<br>ಕೆ.ಎಸ್.ಆರ್.ಪಿ.ಯ 02ನೇ ಪಡೆ, ಬೆಳಗಾಂ<br>ಕೆ.ಎಸ್.ಆರ್.ಪಿ.ಯ 05ನೇ ಪಡೆ, ಮೈಸೂರು<br>ಕೆ.ಎಸ್.ಆರ್.ಪಿ.ಯ 06ನೇ ಪಡೆ, ಗುಲ್ಬರ್ಗಾ<br>ಕೆ.ಎಸ್.ಆರ್.ಪಿ.ಯ 07ನೇ ಪಡೆ, ಮಂಗಳೂರು<br>ಕೆ.ಎಸ್.ಆರ್.ಪಿ.ಯ 08ನೇ ಪಡೆ, ಶಿವಮೊಗ್ಗ<br>ಕೆ.ಎಸ್.ಆರ್.ಪಿ.ಯ ತರಬೇತಿ ಶಾಲೆ, ಬೆಂಗಳೂರು | ಸಂಬಂಧಪಟ್ಟ ಕೆ.ಎಸ್.ಆರ್.ಪಿ.ಯ ಪಡೆಯ ಕಮಾಂಡೆಂಟ್ ಮತ್ತು ತರಬೇತಿ ಶಾಲೆಯ ಪ್ರಾಂಶುಪಾಲರು | ಎಡಿಜಿಪಿ ಕೆ.ಎಸ್.ಆರ್.ಪಿ. |
| ಬೆಂಗಳೂರು ನಗರ ಪೊಲೀಸ್ | ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ಮತ್ತು ಕೇಂದ್ರ ವಿಭಾಗಗಳು<br>ಸಂಚಾರಿ ಪೂರ್ವ ಮತ್ತು ಪಶ್ಚಿಮ ನಗರ ಸಶಸ್ತ್ರ ಮೀಸಲೂ ಪೊಲೀಸ್ ಕೇಂದ್ರಸ್ಥಾನ, ಉತ್ತರ ಮತ್ತು ದಕ್ಷಿಣ | ಸಂಬಂಧಪಟ್ಟ ಉಪ ಪೊಲೀಸ್ ಆಯುಕ್ತರು | ಪೊಲೀಸ್ ಆಯುಕ್ತರು |
| ವಲಯ ಪೊಲೀಸ್ | ಕೇಂದ್ರ, ದಕ್ಷಿಣ, ಉತ್ತರ, ಪೂರ್ವ, ಪಶ್ಚಿಮ, ಈಶಾನ್ಯ ವಲಯ ಕಛೇರಿ/ ಬೆಂಗಳೂರು, ಮೈಸೂರು, ಬೆಳಗಾಂ, ದಾವಣಗೆರೆ, ಮಂಗಳೂರು, ಗುಲ್ಬರ್ಗಾ | ಸಂಬಂಧಪಟ್ಟ ವಲಯದ ಐಜಿಪಿ | ಡಿಜಿ ಮತ್ತು ಐಜಿಪಿ |
| ಕಡಲತೀರ ಪೊಲೀಸ್ ಪಡೆ | ಕಡಲು ತೀರ ಪೊಲೀಸ್, ಉಡುಪಿ ಮತ್ತು ಭಟ್ಕಾಳ | ಸಂಬಂಧಪಟ್ಟ ಎಸ್.ಪಿ. | ಐಜಿಪಿ ಸಿ.ಎಸ್.ಪಿ. ಉಡುಪಿ |
| ರೈಲ್ವೇ ಪೊಲೀಸ್ | ಜಿಲ್ಲಾ ರೈಲ್ವೇ ಪೊಲೀಸ್ ಕಛೇರಿ, ಬೆಂಗಳೂರು<br><br>ವಲಯ ರೈಲ್ವೇ ಪೊಲೀಸ್ ಕಛೇರಿ, ಬೆಂಗಳೂರು | ಎಸ್‌ಪಿ ರೈಲ್ವೇಸ್<br><br>ಡಿಐಜಿ ರೈಲ್ವೇಸ್ | ಡಿಐಜಿಪಿ ರೈಲ್ವೇಸ್<br>ಐಜಿಪಿ ರೈಲ್ವೇಸ್ |
| ಜಿಲ್ಲಾ ಪೊಲೀಸ್ ಕಛೇರಿ | ಬೆಂಗಳೂರು ಗ್ರಾಮಾಂತರ, ತುಮಕೂರು, ಕೋಲಾರ, ಕೆ.ಜಿ.ಎಫ್/ ಮೈಸೂರು, ಮಂಡ್ಯ, ಹಾಸನ, ಕೊಡಗು, ಚಾಮರಾಜನಗರ/ ಬೆಳಗಾಂ, ಧಾರವಾಡ, ಬಿಜಾಪುರ, ಬಾಗಲಕೋಟೆ, ಹಾವೇರಿ, ಗದಗ/ ದ.ಕ. ಮಂಗಳೂರು, ಉ.ಕ.ಕಾರವಾರ, ಚಿಕ್ಕಮಗಳೂರು, ಉಡುಪಿ/ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿ/ ಗುಲ್ಬರ್ಗಾ, ರಾಯಚೂರು, ಬೀದರ್, ಕೊಪ್ಪಳ | ಸಂಬಂಧಪಟ್ಟ ಜಿಲ್ಲೆಯ ಎಸ್.ಪಿ. | ಸಂಬಂಧಪಟ್ಟ ವಲಯ ಐಜಿಪಿಗಳು |
| ಪೊಲೀಸ್ ಉಪ ವಿಭಾಗ ಕಛೇರಿಗಳು | ರಾಜ್ಯದಲ್ಲಿರುವ ಎಲ್ಲಾ ಪೊಲೀಸ್ ಉಪ ವಿಭಾಗಗಳು | ಸಂಬಂಧಪಟ್ಟ ಉಪ ವಿಭಾಗದ ಡಿ.ಎಸ್.ಪಿ. | ಸಂಬಂಧಪಟ್ಟ ಜಿಲ್ಲೆಯ ಎಸ್.ಪಿ. |
| ಪೊಲೀಸ್ ವೃತ್ತ ನಿರೀಕ್ಷಕರ ಕಛೇರಿಗಳು | ರಾಜ್ಯದಲ್ಲಿರುವ ಎಲ್ಲಾ ಪೊಲೀಸ್ ವೃತ್ತ ನಿರೀಕ್ಷಕರ ಕಛೇರಿ | ಸಂಬಂಧಪಟ್ಟ ವೃತ್ತದ ಪೊಲೀಸ್ ಇನ್ಸ್‌ಪೆಕ್ಟರ್ | ಸಂಬಂಧಪಟ್ಟ ಉಪ ವಿಭಾಗದ ಡಿ.ಎಸ್.ಪಿ. |
| ಪೊಲೀಸ್ ಠಾಣೆಗಳು | ರಾಜ್ಯದಲ್ಲಿರುವ ಎಲ್ಲಾ ಪೊಲೀಸ್ ಠಾಣೆಗಳು | ಸಂಬಂಧಪಟ್ಟ ಪೊಲೀಸ್ ಠಾಣೆಯ ಠಾಣಾಧಿಕಾರಿ | ಸಂಬಂಧಪಟ್ಟ ವೃತ್ತ ಇನ್ಸ್‌ಪೆಕ್ಟರ್/ ಉಪ ವಿಭಾಗದ ಡಿ.ಎಸ್.ಪಿ. |

| ಸಾರ್ವಜನಿಕ ಪ್ರಾಧಿಕಾರಿ | ಶಾಖೆ | ಸಕ್ಷಮ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರ |
|---|---|---|---|
| ಪೊಲೀಸ್ ಉಪ ಠಾಣೆಗಳು | ರಾಜ್ಯದಲ್ಲಿರುವ ಎಲ್ಲಾ ಪೊಲೀಸ್ ಉಪ ಠಾಣೆಗಳು | ಸಂಬಂಧಪಟ್ಟ ಪೊಲೀಸ್ ಉಪ ಠಾಣೆಯ ಠಾಣಾಧಿಕಾರಿ | ಸಂಬಂಧಪಟ್ಟ ಪೊಲೀಸ್ ಸಬ್ ಇನ್ಸ್‌ಪೆಕ್ಟರ್/ ಪೊಲೀಸ್ ವೃತ್ತ ನಿರೀಕ್ಷಕರು |

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್

ಪಿ.ಆರ್. 1043 ಆಫ್ ಪೊಲೀಸ್ ರವರ ಪರವಾಗಿ

**ಮಾನ್ಯ ಸಿ.ಎಂ.ಎಂ. ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯದ ಕಛೇರಿ ಬೆಂಗಳೂರು ನಗರ**

**ಅಧಿಸೂಚನೆ**

**ವಿಷಯ :** ವಾರಸುದಾರರಿಲ್ಲದಿರುವ ವಾಹನಗಳನ್ನು ಪೊಲೀಸ್ ಇನ್ಸ್‌ಪೆಕ್ಟರ್ ಆರ್.ಟಿ.ನಗರ ಪೊಲೀಸ್ ಠಾಣೆ ರವರು ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ :** ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ.ನಗರ ಪೊಲೀಸ್ ಠಾಣೆ ರವರ ವರದಿ ದಿನಾಂಕ: 28.07.2003 ಸಿಮಿಸ್ ನಂ. ಘನ ಮುಖ್ಯ ಮಹಾನಗರ ದಂಡಾಧಿಕಾರಿಯವರ ನ್ಯಾಯಾಲಯ, ಬೆಂಗಳೂರು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಈ ಕೆಳಕಂಡ ವಾಹನಗಳನ್ನು ಆರ್.ಟಿ.ನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತು ಪಡಿಸಲಾಗಿದ್ದು, ಅವುಗಳಿಗೆ ವಾರಸುದಾರರು ಇರುವುದಿಲ್ಲ ಎಂದು ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ.ನಗರ ಪೊಲೀಸ್ ಠಾಣೆಯವರು ವರದಿ ಮಾಡಿರುತ್ತಾರೆ. ಸದರಿ ಮಾಲುಗಳಿಗೆ ವಾರಸುದಾರರು ಯಾರಾದರೂ ಇದ್ದಲ್ಲಿ ಅವರುಗಳು ಪೂರ್ಣ ಮಾಹಿತಿಯೊಂದಿಗೆ ತಮ್ಮ ವಾರಸುದಾರಿಕೆಯನ್ನು ಈ ವಿಷಯ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳ ಒಳಗಾಗಿ ರುಜುವಾತುಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ. ತಪ್ಪಿದ್ದಲ್ಲಿ ಸದರಿ ಮಾಲುಗಳನ್ನು ಮುಟ್ಟುಗೋಲು ಹಾಕಲಾಗಿರುತ್ತದೆ ಎಂದು ಆದೇಶಿಸಿರುತ್ತದೆ. ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳ ನಂತರ ಆದಷ್ಟು ಶೀಘ್ರದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಆರ್.ಟಿ.ನಗರ ಪೊಲೀಸ್ ಠಾಣೆ ರವರು ಸದರಿ ಮಾಲುಗಳನ್ನು ಹರಾಜಿನ ಮೂಲಕ ವಿಲೇವಾರಿ ಮಾಡಿ ಅದರಲ್ಲಿ ಬಂದ ಹಣವನ್ನು ಹುಜೂರು ಖಜಾನೆಗೆ ಸಂದಾಯ ಮಾಡಲು ಆದೇಶಿಸಿರುತ್ತದೆ.

| ಕ್ರ. ಸಂ. | ಸಿಮಿಸ್ ನಂ. | ಪಿ.ಎಫ್. ನಂ. | ಅಮಾನತ್ತು ಪಡಿಸಿದ ದಿನಾಂಕ | ವಾಹನ ನೊ.ಸಂಖ್ಯೆ | ಬಣ್ಣ | ಇಂಜಿನ್ ನಂ. | ಚಾರ್ಸಿ ನಂ. |
|---|---|---|---|---|---|---|---|
| 1 | 2 | 3 | 4 | 5 | 7 | 8 | 9 |
| 1. | 35/2003 | 05/2003 | 11.01.03 | ಕೆನಟಿಕ್ ಹೊಂಡಾ ಎಂಇಒ 2882 | ಕಪ್ಪು | 0104112 ಎನ್‌ಐಇಬಿ | ಎನ್‌ಐಇಬಿ 004005 |
| 2. | 36/2003 | 06/2003 | 11.01.03 | ಕೆನಟಿಕ್ ಹೊಂಡಾ ಸಿಟಿಕೆ 275 | ಸಿಮೆಂಟ್ | 058225 ಎನ್‌ಐಇಡಿ | ಎನ್‌ಐಎಫ್‌ಡಿ 060064 |
| 3. | 60/2003 | 09/2003 | 20.01.03 | ಸುಜುಕಿ ಸಮುರಯ್ ಕೆಎ- 03 ಡಬ್ಲ್ಯೂ 8265 | ಕಪ್ಪು | 7803 ಎಂಒ 46246 | 7803 ಎಫ್ 999162 |
| 4. | 63/2003 | 10/2003 | 21.01.03 | ಸುಜುಕಿ ಸಮುರಯ್ ಕೆಎ-02 ಯು 1876 | ಕಪ್ಪು | 7412ಎಂ 510040 | 4712 ಎಫ್ 467410 |
| 5. | 82/2003 | 17/2003 | 27.01.03 | ಬಜಾಜ್ ಎಂಇಕ್ಯೂ 1867 | ನೀಲಿ | 03ಇ21208854 4 | 05ಸಿ 218169380 |
| 6. | 111/2003 | 18/2003 | 05.02.03 | ವಿಜಯ ಸೂಪರ್ ಎಂಇಜೆ 1883 | ಕಪ್ಪು | ಡಿಎಲ್ 150 080455 | ಎಸ್‌ಕೆಎಲ್ 2210000 342 |
| 7. | 113/2003 | 19/2003 | 06.02.03 | ಬಜಾಜ್ ಸಿಕೆಪಿ 384 | ಕ್ರೀಂ | ಇ0029069 ಪಿಎಲ್ 170 | ಪಿಎಲ್ 170 0028819 |

| 1 | 2 | 3 | 4 | 5 | 7 | 8 | 9 |
|---|---|---|---|---|---|---|---|
| 8. | 114/2003 | 20/2003 | 06.02.03 | ಬಜಾಜ್ ಎಂಇಹೆಚ್ 9544 | ನೀಲಿ & ಕಪ್ಪು | 05ಇ81102810 | 09810 807566 |
| 9. | 126/2003 | 22/2003 | 13.02.03 | ರೋಡ್‌ಕಿಂಗ್ ಎಂಇಎಂ 7480 | ಕಪ್ಪು | ಐಜೆಸಿ 250 000035 | ಸಿ 250 4035 |
| 10. | 135/2003 | 25/2003 | 16.02.03 | ಕೆನಟಿಕ್ ಸ್ಪಾರ್ಕ್ ಕೆಎ 03 ಜೆ 4162 | ಕಪ್ಪು | 33000151 | 33002874 |
| 11. | 138/2003 | 26/2003 | 17.02.03 | ಜವಾ ಸಿಎನ್‌ಎಂ 4843 | ಕಪ್ಪು | ಐಜೆಡಿ 250044915 | ಐಜೆಇ 205608 |
| 12. | 152/2003 | 28/2003 | 22.02.03 | ಲೂನಾ ಕೆಎ-04 ಕ್ಯೂ 133 | ಕೆಂಪು | 95ಹೆಚ್130459 61 | 194413 056711 |
| 13. | 156/2003 | 29/2003 | 23.02.03 | ಲೂನಾ ಸಿಕೆಹೆಚ್ 907 | ಕೆಂಪು | 11098033 | 12051662 |
| 14. | 159/2003 | 36/2003 | 27.02.03 | ಲೂನಾ ಕೆಎ-04 ಇ 3304 | ಕಪ್ಪು | 31031739 | 32016202 |
| 15. | 178/2003 | 39/2003 | 06.03.03 | ಲೂನಾ ಸಿಕೆಜ 6559 | ಕೆಂಪು | 7097840 | 22051115 |
| 16. | 218/2003 | 53/2003 | 25.03.03 | ಕೆನಟಿಕ್ ಹೊಂಡಾ ಕೆಎ-04-ಆರ್.9349 | ನೀಲಿ & ಬಿಳಿ | ಬಿಸಿ 30011308 | ಬಿಸಿ 30009559 |
| 17. | 243/2003 | 57/2003 | 04.04.03 | ಕೆನೆಟಿಕ್ ಸೈಲ್ ಕೆಎ-04 ಎಕ್ಸ್ 4619 | ಹಸಿರು | ಎನ್‌ಐಇ-ಎನ್ ಎಫ್ 739659 | ಎನ್‌ಐಇ-ಎನ್‌ಎಫ್ 745541 |
| 18. | 244/2003 | 58/2003 | 04.04.03 | ಟಿ.ವಿ.ಎಸ್. 50 ಕೆಂಪು | | | 449924-07 -86 |
| 19. | 245/2003 | 59/2003 | 04.04.03 | ಬಜಾಜ್ ಸೂಪರ್ ಸಿಕೆಕೆ 5317 | ಬಿಳಿ | 0586 33624 | 050600075 |
| 20. | 246/2003 | 60/2003 | 05.04.03 | ಬಜಾಜ್ ಎಂಇವಿ 6041 | ಕಪ್ಪು | ವಿ462ಐ2ಎಂ 80509 | ವಿ76212279630 |

ಮುಖ್ಯ ಮಹಾನಗರ ದಂಡಾಧಿಕಾರಿ,
ಬೆಂಗಳೂರು ನಗರ.

ಪಿ.ಆರ್. 1044

## ಜಿಲ್ಲಾ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಕೊಪ್ಪಳರವರಲ್ಲಿ

## ಪ್ರಕಟಣೆ

**ಮರಣ ಪ್ರಕರಣ ಸಂ: ಕಾಅಕೊ:ಕಾನಪ: ಸಿಆರ್-69: 2003-04 ದಿನಾಂಕ: 31ನೇ ಜುಲೈ 2003**

**ಅರ್ಜಿದಾರಳು:** ಶ್ರೀಮತಿ ತಿಪ್ಪಮ್ಮ ಗಂಡ ಯಮನಪ್ಪ ಸಾ:: ನಾಗಲಾಪೂರ, ತಾ:: ಲಿಂಗಸಗೂರು, ಜಿಲ್ಲಾ:: ರಾಯಚೂರು ಹಾಲವಸ್ತಿ, ತಾವರಗೇರಿ, ಜಿಲ್ಲಾ:: ಕೊಪ್ಪಳ

**ವಿರುದ್ಧ**

**ಎದುರುಗಾರರು:** 1) ಹೊನ್ನೂರ ಹುಸೇನ ತಂದೆ ಮೊಹಮ್ಮದ್ ಹುಸೇನ, ಸಾ:: ಪಿಂಜಾರ ಓಣಿ, ಕನಕಗಿರಿ, ತಾ:: ಗಂಗಾವತಿ, ಜಿಲ್ಲಾ:: ಕೊಪ್ಪಳ

2) ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಶೂರೆನ್ಸ್ ಕಂಪನಿ, ಲಿಮಿಟೆಡ್, ಡಿವಿಜನಲ್ ಆಫೀಸ್, ಬಳ್ಳಾರಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಯಮನಪ್ಪ ತಂದೆ ಚತ್ರಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 31.01.2002 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತ ಹೆಂಡತಿಯಾದ ಶ್ರೀಮತಿ ತಿಪ್ಪಮ್ಮ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದಲ್ಲಿ ಯಾವುದು ಮೊದಲು ಅದರೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿಸಲ್ಲಿಸಬಹುದಾಗಿದ್ದು, ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಜಿ. ಸಿದ್ದಲಿಂಗಪ್ಪ ಆಲೂರು,**

ಪಿ.ಆರ್. 1045 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲಾ, ಕೊಪ್ಪಳ.

**ಜಿಲ್ಲಾ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಕೊಪ್ಪಳರವರಲ್ಲಿ**

**ಪ್ರಕಟಣೆ ಮರಣ ಪ್ರಕರಣ ಸಂ: ಕಾಆಕೊ:ಕಾನಪ: ಸಿಆರ್-68: 2003-04 ದಿನಾಂಕ: 31ನೇ ಜುಲೈ 2003**

**ಅರ್ಜಿದಾರಳು:** ಶ್ರೀಮತಿ ಅಡಿಮೆಮ್ಮ ಗಂಡ ಮಾಲಪ್ಪ ನಾಗಶೆಟ್ಟಿ, ಸಾ:: ಕಳಮಳ್ಳಿ, ತಾ:: ಕುಷ್ಟಗಿ, ಜಿಲ್ಲಾ: ಕೊಪ್ಪಳ

**ವಿರುದ್ಧ**

**ಎದುರುಗಾರರು:** 1) ಹೊನ್ನೂರ ಹುಸೇನ ತಂದೆ ಮೊಹಮ್ಮದ್ ಹುಸೇನ, ಸಾ:: ಪಿಂಜಾರ ಓಣಿ, ಕನಕಗಿರಿ, ತಾ:: ಗಂಗಾವತಿ, ಜಿಲ್ಲಾ:: ಕೊಪ್ಪಳ

2) ಡಿವಿಜನಲ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂಪನಿ, ಲಿಮಿಟೆಡ್, ಡಿವಿಜನಲ್ ಆಫೀಸ್, ಬಳ್ಳಾರಿ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಮಾಲಪ್ಪ ತಂದೆ ಪಕೀರಪ್ಪ ಎಂಬುವವರು ಪ್ರತಿವಾದಿಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 31.01.2002 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತ ಹೆಂಡತಿಯಾದ ಶ್ರೀಮತಿ ಅಡಿಮೆಮ್ಮ ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದಲ್ಲಿ ಯಾವುದು ಮೊದಲು ಅದರೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದ್ದು, ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಜಿ. ಸಿದ್ದಲಿಂಗಪ್ಪ ಆಲೂರು,**

ಪಿ.ಆರ್. 1046 ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲಾ, ಕೊಪ್ಪಳ.

**ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಸಹಾಯಕ ಸರ್ಕಾರಿ ವಕೀಲರ ಆಯ್ಕೆ ಸಮಿತಿ ಕಾವೇರಿ ಭವನ, ಕ.ಗೃ. ಮಂ. ಸಂಕೀರ್ಣ, 6ನೇ ಮಹಡಿ, ಕೆ. ಜಿ. ರಸ್ತೆ, ಬೆಂಗಳೂರು- 560 009.**

**Re-done list of Selected Candidates For the Post of Asst. Public Prosecutors-Cum-Asst Govt. Pleaders in the Department of Prosecutions and Govt. Litigations, As per the Orders Passed by the Hon'ble Supereme Court of India in Writ Petition (C) No.463/2002 with W.P.Nos.519 and 560/2002 and 111/03.**

| Sl. No. | Reg. No. | Name of the candidates | Category |
|---|---|---|---|
| 1 | 2 | 3 | 4 |
| | | **Sriyuths/Smt.** | |
| 1. | 627 | Shirur S.A. | G.M |
| 2. | 620 | M. Jayarama Sheetty | G.M |
| 3. | 1172 | N. Krishnaiah | G.M |
| 4. | 901 | Basavaraj S. Chengti. | G.M |
| 5. | 603 | Srikaveri B. Kalmatt | G.M |
| 6. | 1065 | Dalavai Chakrapani | G.M |
| 7. | 1123 | Lakshmidevi Patil | G.M |
| 8. | 196 | R. M. Ganjigatti | G.M |
| 9. | 613 | Amaregouda | G.M |
| 10. | 773 | Tanuja Baburao Hosapattan | G.M |
| 11. | 1079 | K. M. C. Shivashankara Murthy | G.M |
| 12. | 583 | Narayana Serigar. U. | G.M |
| 13. | 137 | N. Nandini | G.M |
| 14. | 1267 | D. P. Kumaraswamy | G.M |

| 1 | 2 | 3 | 4 |
|---|---|---|---|
| 15. | 1591 | Indira M. Chettiyar | G.M |
| 16. | 3 | Viresh G. Mamani | G.M |
| 17. | 1063 | K. Mohan Kumar | G.M |
| 18. | 705 | B. Rajeshwari | G.M |
| 19. | 1238 | K. G. Kalpana | G.M |
| 20. | 1291 | Kiran S. Patil | G.M |
| 21. | 1569 | Rangappa G.T. | G.M |
| 22. | 604 | Sumitra M. anchatgeri | G.M |
| 23. | 1159 | Mohan S. Tankasali | II-A. |
| 24. | 112 | Vasanthi. M. Angadi | G.M |
| 25. | 550 | M. Krishnaveni | G.M |
| 26. | 661 | R. T. Asha | G.M |
| 27. | 157 | Varada Malakappa | III-B. |
| 28. | 754 | P. G. Vernekar | II-A. |
| 29. | 306 | Rajesab Amminasab Barawali | II-B. |
| 30. | 181 | Sharanagouda V. Patil | III-B. |
| 31. | 766 | M. N. Ranjana Rao | G.M |
| 32. | 1250 | Shobharani Hiremath | G.M |
| 33. | 805 | S. Nataraj | III-A. |
| 34. | 1093 | K. G. Deshabandari | II-A. |
| 35. | 455 | Chandrashekar M. B. | III-A. |
| 36. | 744 | B. Nagasundramma | G.M |
| 37. | 54 | Renuka G. Kulkarni | G.M |
| 38. | 161 | C. G. Mohamed Mujeerulla | II-B. |
| 39. | 680 | Savita S. Ghatti | G.M |
| 40. | 884 | M. S. Usha | G.M |
| 41. | 429 | Shanthi Bai | G.M |
| 42. | 303 | Siddaruda M. Gejjihalli | II-A. |
| 43. | 887 | T. G. Nagaraju | II-A. |
| 44. | 918 | Latha Kumari. M. | III-B. |
| 45. | 1630 | Mallikarjuna G. Pattar | II-A. |
| 46. | 1234 | Veena M. Naikar | S.T. |
| 47. | 1611 | R. Srinivasa Raju | I |
| 48. | 401 | N. Sheela | III-A. |
| 49. | 972 | Rajkumar B. Jagamani | I |
| 50. | 14 | C. G. vishalakshi | III-B. |
| 51. | 1518 | B. Ganesh | S.C. |
| 52. | 963 | B. Ganesh Naik | S. C. |
| 53. | 1680 | T. B. Lakshmidevi | II-A. |
| 54. | 1525 | Anilkumar R. Toravi | S.C. |
| 55. | 991 | K. J. Meenakumari | S.C. |
| 56. | 288 | Ganapathi Kadappa Mahurkar | S.C. |
| 57. | 494 | M. B. Sunkanna | S.C. |
| 58. | 1633 | Murthy | S.C. |
| 59. | 1181 | D. Sumathi Shanthameri | I. |
| 60. | 1003 | N. B. Alamelu | S.C. |
| 61. | 526 | Ramaswamy Subbanna Dharmagiri | S.C |
| 62. | 1066 | Shailaja Krishna Naik | II-A. |
| 63. | 609 | Singh Changdev | S.C. |
| 64. | 467 | Savithri M. | S.C. |
| 65. | 1391 | M. S. Manjula | II-A. |
| 66. | 334 | B. K. Kamakshi. | S.C. |
| 67. | 13 | B. Arunakshi | S.C. |
| 68. | 153 | D. M. Shobha | S.T. |

ಕಾರ್ಯದರ್ಶಿ
ಸಹಾಯಕ ಸರ್ಕಾರಿ ಅಭಿಯೋಜಕರು ಮತ್ತು ಸಹಾಯಕ ಸರ್ಕಾರಿ
ವಕೀಲರ ಆಯ್ಕೆ ಸಮಿತಿ. ಕಾವೇರಿ ಭವನ, ಕ.ಗೃ. ಮಂ. ಸಂಕೀರ್ಣ,
6ನೇ ಮಹಡಿ, ಕೆ. ಜಿ. ರಸ್ತೆ, ಬೆಂಗಳೂರು-560 009

ಪಿ.ಆರ್. 1027

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ**

**ಆದೇಶ ಸಂಖ್ಯೆ: ಇಎಕ್ಸ್‌ಇ/ಸಿಆರ್‌ಎಂ/ಡಿಟಿಸಿಆರ್/83/ 2000-01 ದಿನಾಂಕ: 17ನೇ ಜುಲೈ 2003**

**ಪ್ರಕರಣ ಸಂಖ್ಯೆ : ಅಬಕಾರಿ ಸಬ್ ಇನ್‌ಸ್ಪೆಕ್ಟರ್, ದಕ್ಷಿಣ ಉಪ ವಲಯ ನಂ-2, ಬೆಳಗಾಂವ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 3/2000-01 ದಿನಾಂಕ: 21ನೇ ಆಗಸ್ಟ್ 2000**

**ಉಪಸ್ಥಿತರು : ಶ್ರೀ ಪಿ. ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

| **ಫಿರ್ಯಾದಿ:** | **ಆರೋಪಿತರು:** |
|---|---|
| ಶ್ರೀ ಹೆಚ್. ಆರ್. ಚಿಕ್ಕಜಂಬಗಿ | ಶ್ರೀ ಮಾರುತಿ ನಾಗೋಜಿ ಖಾಂಡೇಕರ |
| ಅಬಕಾರಿ ಸಬ್ ಇನ್‌ಸ್ಪೆಕ್ಟರ್ | ಸಾ: ಸಿನೋಳ್ಳಿ ತಾ: ಚಂದಗಡ, |
| ದಕ್ಷಿಣ ಉಪ ವಲಯ ನಂ-2, ಬೆಳಗಾಂವ. | ಜಿಲ್ಲೆ: ಕೊಲ್ಲಾಪುರ ವಾಹನ-ಮಾಲಿಕ. |

**ಪ್ರಸ್ತಾವನೆ:**

ದಿನಾಂಕ: 21.08.2000 ರಂದು ಈ ಪ್ರಕರಣದ ಫಿರ್ಯಾದಿಯಾದ ಅಬಕಾರಿ ಸಬ್ ಇನ್‌ಸ್ಪೆಕ್ಟರ್ ದಕ್ಷಿಣ ಉಪ ವಲಯ ನಂ-2, ಬೆಳಗಾಂವ ಮತ್ತು ಸಿಬ್ಬಂದಿ ಹಾಗೂ ಪಂಚರೊಂದಿಗೆ ಬೆಳಗಾಂವ ತಾಲ್ಲೂಕಿನ ಗಣೇಶಪುರ ಮತ್ತು ಬೆಳಗುಂದಿ ಗ್ರಾಮಗಳ ನಡುವೆ ಇರುವ ಬೆನ್ನಳ್ಳಿ ಕ್ರಾಸ್‌ನಲ್ಲಿ ಗಸ್ತು ತಿರುಗುತ್ತಾ ಇರುವ ಸಮಯದಲ್ಲಿ ಒಂದು ಟ್ರ್ಯಾಕ್ಟರ್‌ನಲ್ಲಿದ್ದವನು ಸಮವಸ್ತ್ರದ ಸಿಬ್ಬಂದಿಯನ್ನು ನೋಡಿ ಗಡ ಬಡಿಸಿ ಒಮ್ಮೆಲೆ ವೇಗ ಹೆಚ್ಚಿಸಲಾಗಿ ಅಧಿಕಾರಿಗಳಿಗೆ ಸಂಶಯ ಬಂದು ತಡೆಯಲು ಪ್ರಯತ್ನಿಸುವುದರೊಳಗೆ ಅಲ್ಲಿಯ ಕ್ರಾಸ್‌ನಲ್ಲಿ ನಿಲ್ಲಿಸಿ ಪರಾರಿಯಾದನು. ನಂತರ ಟ್ರಾಲಿಯಲ್ಲಿ ಏನಿದೆ ಅಂತ ನೋಡಲಾಗಿ ಅದರಲ್ಲಿ ಕರೆ ಬಣ್ಣದ ಮೋಟಾರ್ ಟ್ಯೂಬುಗಳಿದ್ದವು ಮತ್ತು ಅವುಗಳ ಬಗ್ಗೆ ಅಧಿಕಾರಿಗಳು ಅಲ್ಲಿಯೇ ನಿಂತಿದ್ದ ಜನರನ್ನು ಕರೆದು ಇದು ಯಾರದು ಎಂದು ಕೇಳಿದಾಗ ತಮಗೆ ಗೊತ್ತಿಲ್ಲ ಎಂದು ತಿಳಿಸಿದರು. ನಂತರ ಸದರಿ ಟ್ರ್ಯಾಕ್ಟರ್ ಟ್ರಾಲಿಯಲ್ಲಿದ್ದ ಟ್ಯೂಬ್‌ಗಳನ್ನು ಪರಿಶೀಲಿಸಲಾಗಿ ಅವುಗಳು 10 ಮೋಟಾರ್ ಟ್ಯೂಬ್‌ಗಳಿದ್ದು ಅವುಗಳ ಬಾಯಿಯನ್ನು ಬಿಚ್ಚಿ ನೋಡಲಾಗಿ ಅದರಲ್ಲಿ ತಿಳಿ ನೀರಿನಂತಹ ದ್ರವವಿದ್ದು ಉಗ್ರವಾದ ವಾಸನೆಯಿಂದ ಕೂಡಿತ್ತು. ನಂತರ ಅಧಿಕಾರಿಗಳು ಇದು ಕಳ್ಳಭಟ್ಟಿ ಸಾರಾಯಿ ಅಂತಾ ಖಾತ್ರಿಪಡಿಸಿಕೊಂಡು, ನಂತರ ಅವುಗಳು ಪ್ರತಿಯೊಂದು ಸುಮಾರು 20 ಲೀ ನಷ್ಟಿದ್ದು ಒಟ್ಟು 200 ಲೀ ಆಗಬಹುದು. ನಂತರ ಸದರಿ ಟ್ರ್ಯಾಕ್ಟರ್‌ನಲ್ಲಿ ಯಾವುದೇ ಮಾಹಿತಿ ಬಗ್ಗೆ ಕಾಗದ ಪತ್ರಗಳನ್ನು ಹುಡುಕಲಾಗಿ ಅಂತಹ ಯಾವುದೇ ಕಾಗದ ಪತ್ರಗಳು ಸಿಗಲಿಲ್ಲ. ನಂತರ ಅದನ್ನು ತಪಾಸಿಸಲಾಗಿ ಅದರ ನಂ. ಎಂಹೆಚ್-09-ಯು-747 ಇದ್ದು, ಇಂಜಿನ್ ನಂ. 52128206899, ಚಾಸ್ಸಿ ನಂ. 12211874820 ಮತ್ತು ಮಾಡೆಲ್ ನಂ. 364-NC ಅಂತಾ ಇದ್ದು ಐಶರ್ ಕಂಪನಿಯದಿದ್ದು ನೀಲಿ ಬಣ್ಣದ್ದು ಇರುತ್ತದೆ. ಅದಕ್ಕೆ ಜೋಡಿಸಿದ ಟ್ರಾಲಿ ನಂ. ಎಂಹೆಚ್-09-ಯು-748 ಚಾಸ್ಸಿ ನಂ. 17, 1988 ರಲ್ಲಿ ತಯಾರಿಸಿದ್ದು ಇರುತ್ತದೆ. ನಂತರ ಇದು ಬೇಕಾಯ್ದೆಶೀರ ರೀತಿಯಲ್ಲಿ ಸರಕಾರಕ್ಕೆ ಕರಕೊಡದೇ ತಯಾರಿಸಿದ್ದು ಕಳ್ಳಭಟ್ಟಿ ಸಾರಾಯಿ ಇರುವುದರಿಂದ ರಾಸಾಯನಿಕ ವಿಶ್ಲೇಷಣೆ ಕುರಿತು ಪ್ರತಿಯೊಂದು ಟ್ಯೂಬ್‌ನಿಂದ 750 ಎಂಎಲ್‌ನ ಬಾಟ್ಲಿಯಲ್ಲಿ 1 ರಂತೆ 10 ಬಾಟ್ಲಿಗಳಲ್ಲಿ ತೆಗೆದು ಸ್ಯಾಂಪಲ್ ಅಂತಾ ಶೀಲಬಂದು ಮಾಡಿ ಪಂಚರ ಹಾಗೂ ಫಿರ್ಯಾದಿಯವರ ಸಹಿ ಚೀಟಿಗಳನ್ನು ಅಂಟಿಸಿದ್ದಾರೆ. ನಂತರ ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13,14 ಮತ್ತು ಶಿಕ್ಷಾರ್ಹ ಕಲಂ 32, 34 ಮತ್ತು 38(ಎ) ಪ್ರಕಾರ ಗುನ್ಹೆ ನಂ. 3/2000-01ನ್ನು ದಾಖಲಿಸಿ ಮುದ್ದೆ ಮಾಲನ್ನು ಹಾಗೂ ವಾಹನವನ್ನು ಜಪ್ತಿ ಮಾಡಿ ತಮ್ಮ ತಾಬಾಕ್ಕೆ ತೆಗೆದುಕೊಂಡು, ಪಂಚರ ಸಮಕ್ಷಮ ಗುನ್ಹೆ ಘಟಿಸಿದ ಸ್ಥಳದಲ್ಲಿಯೇ ಪಂಚನಾಮೆಯನ್ನು 11.40 ರಿಂದ 1.00 ಗಂಟೆಯವರೆಗೆ ಬರೆದು, ಮುಂದಿನ ಕ್ರಮಕ್ಕಾಗಿ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಶ್ರೀ ಪರುಶರಾಮ ತಂದೆ ಮಾರುತಿ ಖಾಂಡೇಕರ ಇವರು ವಾಹನ ಮಾಲಿಕರ ಪರವಾಗಿ ವಾಹನವನ್ನು ಮಧ್ಯಂತರ ವಶಕ್ಕೆ ನೀಡಲು ಶ್ರೀ ಎಸ್. ಆರ್. ನಾಯಿಡು ನ್ಯಾಯವಾದಿಗಳ ಮೂಲಕ ದಿನಾಂಕ: 31.08.2000 ರಂದು ಅರ್ಜಿ ನೀಡಿರುತ್ತಾರೆ.

ದಿನಾಂಕ: 24.08.2000 ರಂದು ಅಬಕಾರಿ ಕಾಯಿದೆ ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ವಾಹನ ಮಾಲಿಕರಿಗೆ ನೀಡಲಾಗಿತ್ತು. ದಿನಾಂಕ: 31.08.2000 ರಂದು ಶ್ರೀ ಎಸ್. ಆರ್. ನಾಯಿಡು ವಕೀಲರ ಮುಖಾಂತರ ನೋಟಿಸಿಗೆ ಉತ್ತರ ನೀಡಿರುತ್ತಾರೆ.

ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರವಾಗಿ ಫಿರ್ಯಾದಿ ಮತ್ತು ಒಬ್ಬ ಪಂಚ ಸಾಕ್ಷಿದಾರನ ಹೇಳಿಕೆ ಪಡೆಯಲಾಗಿದೆ. ಹಾಗೂ 10 ದಾಖಲೆಗಳನ್ನು ಗುರುತಿಸಲಾಗಿದೆ. ಜಪ್ತಾದ ವಾಹನವನ್ನು ಮುದ್ದೆ ಮಾಲು-1 ಹಾಗೂ ಮಾದರಿ ಮದ್ಯದ ಬಾಟ್ಲಿಗಳನ್ನು ಮುದ್ದೆ ಮಾಲು-2 ಅಂತಾ ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಿರುವ ಸಾಕ್ಷದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 21.08.2000 ರಂದು ವಾಹನ ಟ್ರ್ಯಾಕ್ಟರ್ ಸಂ. ಎಂಹೆಚ್-09-ಯು-747 ಟ್ರಾಲಿ ನಂ. ಎಂಹೆಚ್-09-ಯು-748 ದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಲಾಗಿತ್ತೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದರೆ ವಾಹನ ಮಾಲಿಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇಯ ಅಂಶವನ್ನು ಗುಣಾತ್ಮಕವಾಗಿ, ಎರಡನೇಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೇಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ಮಾಣಿಕ ವಾಸುದೇವ ಶೆಟ್ಟಿ, ಶೆಟ್ಟಿಗಲ್ಲಿ, ಬೆಳಗಾಂವ ಇವರು ಸದರಿ ಪ್ರಕರಣದ ಪಂಚ ಸಾಕ್ಷಿದಾರರಿದ್ದು, ಸದರಿಯವರು ದಿನಾಂಕ: 19.12.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 21.08.2001 ರಂದು ಗಣೇಶಪುರ ಮತ್ತು ಬೆನ್ನಾಳಿ ಕ್ರಾಸ್ ನಡುವೆ ಇರುವ ಚನ್ನಳ್ಳಿ ಕ್ರಾಸ್‌ನ ಹತ್ತಿರ ಸದರಿಯವರು ಅಬಕಾರಿ ಅಧಿಕಾರಿಗಳ ಜೊತೆಗೆ ಹೋದಾಗ ಬೆಳಗಾಂವ ಕಡೆಯಿಂದ ಬರುವ ಟ್ರ್ಯಾಕ್ಟರ್ ಟ್ರೇಲರನ್ನು ನೋಡಿದರು. ಅಬಕಾರಿ ಅಧಿಕಾರಿಗಳನ್ನು ನೋಡಿ ಡ್ರೈವರನು ಓಡಿಹೋದನು, ಅವನನ್ನು ಹಿಡಿಯಲು ಅಧಿಕಾರಿಗಳು ಪ್ರಯತ್ನ ಮಾಡಿದರು, ಅವನು ಸಿಗಲಿಲ್ಲ, ಟ್ರ್ಯಾಕ್ಟರ್‌ನ್ನು ಮತ್ತು ಟ್ರೇಲರನ್ನು ಶೋಧಿಸಿ ನೋಡಲಾಗಿ ಟ್ರೇಲರನಲ್ಲಿ 10 ಟ್ಯೂಬ್‌ಗಳು ಇದ್ದವು, ಪತ್ರಿಯೊಂದು ಟ್ಯೂಬ್‌ಗಳಿಂದ ಸ್ಯಾಂಪಲ್ ತೆಗೆದು, ಸದರಿಯವರ ಸಹಿ ಚೀಟಿಗಳನ್ನು ಅಂಟಿಸಿದ್ದಾರೆ. ಪ್ರತಿಯೊಂದು ಟ್ಯೂಬ್‌ನಲ್ಲಿ 20 ಲೀ ದಂತೆ ಒಟ್ಟು 200 ಲೀ ಭಟ್ಟಿ ಸಾರಾಯಿ ಇದ್ದಿತು, ಟ್ರ್ಯಾಕ್ಟರ್ ನಂ. ಎಂಹೆಚ್-09-ಯು-747 ಇತ್ತು ಎಂದು ತಿಳಿಸಿದ್ದಾರೆ. ನಂತರ ಸ್ಥಳದಲ್ಲಿಯೇ ಪಂಚನಾಮಾ ಮಾಡಿ, ಟ್ರ್ಯಾಕ್ಟರ್ ಟ್ರೇಲರ್ ಮತ್ತು ಟ್ಯೂಬ್‌ಗಳನ್ನು ಅಬಕಾರಿ ಅಧಿಕಾರಿಗಳು ತಮ್ಮ ಕಛೇರಿಗೆ ತೆಗೆದುಕೊಂಡು ಹೋದರು, ಟ್ರೇಲರ್ ಕಛೇರಿ ಆವರಣದಲ್ಲಿದ್ದು ಅದನ್ನು ಮುದ್ದೆ ಮಾಲು-1 ಅಂತಾ ಗುರುತಿಸಿದೆ. ಟ್ರ್ಯಾಕ್ಟರ್‌ನ್ನು ಈ ಹೊತ್ತು ಹಾಜರ್‌ಪಡಿಸಿದ್ದು ಅದನ್ನು ಮುದ್ದೆ ಮಾಲು-2 ಅಂತಾ ಗುರುತಿಸಿದೆ. ಪಂಚನಾಮೆಯ ಮೇಲಿನ ಪಂಚರ ಸಹಿಯನ್ನು ಅವರು ಗುರುತಿಸಿದ್ದು, ನಿಪಿ-1 ಅಂತಾ ಗುರುತಿಸಿದೆ. ಅದರ ಮೇಲಿನ ಅವರ ಸಹಿಯನ್ನು ನಿಪಿ-1ಎ ಅಂತಾ ಗುರುತಿಸಿದೆ.

ಸದರಿಯವರನ್ನು ವಾಹನ ಮಾಲೀಕರ ಪರ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ಪಾಟೀ ಸವಾಲಿನಲ್ಲಿ ಅವರು ಸುಮಾರು 10.00 ಗಂಟೆಗೆ ಅಬಕಾರಿ ಕಛೇರಿಯನ್ನು ಬಿಟ್ಟಿದ್ದು, ರಸ್ತೆಯಲ್ಲಿ ಯಾವುದೇ ವಾಹನವನ್ನು ತಪಾಸಣೆ ಮಾಡಿರುವುದಿಲ್ಲ. ಬೆನ್ನಾಳಿ ಕ್ರಾಸ್‌ನಿಂದ ಬೆನ್ನಾಳಿ ಊರು ಎಷ್ಟು ದೂರ ಇದೆ ಎಂದು ಅವರಿಗೆ ಗೊತ್ತಿಲ್ಲ. ಸದರಿ ಕ್ರಾಸ್‌ನಲ್ಲಿ ಚಹದ ಅಂಗಡಿ ಹಾಗೂ ಇತರೇ ಅಂಗಡಿಗಳು ಇರುವುದಿಲ್ಲ. ಅನ್ನುವುದು ಸುಳ್ಳು, ಅವರು ಹಾಗೂ ಅಧಿಕಾರಿಗಳು ಟ್ರ್ಯಾಕ್ಟರ್ ಡ್ರೈವರನನ್ನು ಹಿಡಿಯಲು ಹೋಗಿದ್ದ ಅವನು ಸಿಗಲಿಲ್ಲ. ಟ್ರ್ಯಾಕ್ಟರ್ ಸಿಕ್ಕ ಸ್ಥಳದ ಚೆಕ್‌ಬಂದಿ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಹೇಳಲು ಬರುವುದಿಲ್ಲ, ಟ್ರ್ಯಾಕ್ಟರ್‌ನಲ್ಲಿ ಟ್ಯೂಬ್ ಬಿಟ್ಟು ಮತ್ತೆ ಏನೂ ಸಿಗಲಿಲ್ಲ, ಯಾವುದೇ ಕಾಗದ ಪತ್ರಗಳು ಸಿಗಲಿಲ್ಲ, ಟ್ರ್ಯಾಕ್ಟರ್ ಯಾವ ಕಂಪನಿಯದ್ದು ಹೇಳಲಿಕ್ಕೆ ಬರುವುದಿಲ್ಲ ಆದರೆ ಮಹಾರಾಷ್ಟ್ರ ರಜಿಸ್ಟ್ರೇಶನ್ ಇತ್ತು ಎಂದು ತಿಳಿಸಿದ್ದಾರೆ. ಟ್ರ್ಯಾಕ್ಟರ್ ಮಾಲೀಕರು ಯಾರು ಎಂಬುದು ಗೊತ್ತಿಲ್ಲ, ಪಂಚನಾಮೆಯನ್ನು ಅಧಿಕಾರಿಗಳು ಹೇಳಿದರು ಗಾರ್ಡನು ಬರೆದಿರುತ್ತಾನೆ, ಯಾವ ಗಾರ್ಡನು ಬರೆದಿರುತ್ತಾನೆ ಗೊತ್ತಿಲ್ಲ ಎಂದು ತಿಳಿಸಿದ್ದಾರೆ. ಅವರಿಗೆ ಕನ್ನಡ ಓದಲು ಬರೆಯಲು ಬರುತ್ತದೆ, ಪಂಚನಾಮೆಯನ್ನು ಓದಿ ನೋಡಿ ಸಹಿ ಮಾಡಿರುವುದಾಗಿ ತಿಳಿಸಿದ್ದಾರೆ. ಎಂಜಿನ್ ನಂಬರು ಮತ್ತು ಚಾಸ್ಸಿ ನಂ ಗೊತ್ತಿಲ್ಲ, ಆ ದಿನ ಬೆನ್ನಾಳಿ ಕ್ರಾಸ್‌ಗೆ ಹೋಗಿರುವುದಿಲ್ಲ ಎನ್ನುವುದು ಸರಿಯಲ್ಲ ಮತ್ತು ಪಂಚನಾಮೆಯನ್ನು ಗುನ್ನೆ ಹಿಡಿದ ಸ್ಥಳದಲ್ಲಿ ಪಂಚನಾಮೆಗೆ ಸಹಿ ಮಾಡಿರುತ್ತಾನೆ. ಅವರ ಮುಂದೆ ಮಾಡಿರುವುದಿಲ್ಲ ಎಂಬುದು ಸರಿಯಲ್ಲ. 12-15 ಕೇಸಿನಲ್ಲಿ ಪಂಚರಾಗಿ ಸಹಿ ಮಾಡಿರುತ್ತಾರೆ. ಅವರು ಕಛೇರಿಯಲ್ಲಿ ಬರೆದಿಟ್ಟ ಪಂಚನಾಮೆಗೆ ಸಹಿ ಮಾಡಿದ್ದಾರೆ ಎನ್ನುವುದು ಸರಿಯಲ್ಲ. ಬೆನ್ನಾಳಿ ಕ್ರಾಸ್‌ಗೆ ಹೋಗಿಯೇ ಇಲ್ಲ ಎನ್ನುವುದು ಸರಿಯಲ್ಲ. ಅವರ ಮುಂದೆ ಟ್ರ್ಯಾಕ್ಟರ್ ಜಪ್ತಿ ಮಾಡಿಲ್ಲ ಎನ್ನುವುದು ಸರಿಯಲ್ಲ ಮತ್ತು ಅಧಿಕಾರಿಗಳ ಮಾತು ಕೇಳಿ ಅವರು ಸಾಕ್ಷಿ ಹೇಳುತ್ತಿದ್ದಾರೆ ಎಂದರೆ ಸರಿಯಲ್ಲ. ಅವರ ಮುಂದೆ ಸ್ಯಾಂಪಲ್ ತೆಗೆದಿರುವುದಿಲ್ಲ ಅನ್ನುವುದು ಸರಿಯಲ್ಲ ಎಂದು ತಿಳಿಸಿದ್ದಾರೆ. ಇದರಿಂದ ವಾಹನ ಮಾಲೀಕರ ಪರ ವಕೀಲರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬಂದಿರುವುದಿಲ್ಲ.

ಪ್ರಾ.ಸಾ-2 ಹುಸೇನ್‌ಸಾಬ್ ರಾಜೇಸಾಬ್ ಚಿಕ್ಕಜಂಬಗಿ, ಅಬಕಾರಿ ಸಬ್ ಇನ್‌ಸ್ಪೆಕ್ಟರ್, ದಕ್ಷಿಣ ಉಪ ವಲಯ ನಂ-2, ಬೆಳಗಾಂವ ಇವರು ಈ ಪ್ರಕರಣದ ಫಿರ್ಯಾದಿಯಾಗಿದ್ದು ಸದರಿಯವರು ದಿನಾಂಕ: 23.01.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆ ನೀಡಿರುತ್ತಾರೆ. ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸದರಿಯವರು ಸದರಿ ವಾಹನವನ್ನು ಜಪ್ತಿ ಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ. ಹಾಗೂ ಈ ಬಗ್ಗೆ ವಿವರವಾದ ಪಂಚನಾಮೆಯನ್ನು 11.40 ರಿಂದ 1.00 ಗಂಟೆಯ ವರೆಗೆ ಸ್ಥಳದಲ್ಲಿಯೇ ತಯಾರಿಸಿದ್ದಾರೆ. ಅದರ ದೃಢೀಕೃತ ಪ್ರತಿಯನ್ನು ನಿಪಿ-1 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ 1ಬಿ ಅಂತಾ ಗುರುತಿಸಿದೆ. ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 11, 13, ಸಹ ಕಲಂ 14 ಮತ್ತು 32, 34, 38ಎ ಪ್ರಕಾರ ಅಪರಾಧವಾಗಿದ್ದು, ಸದರಿಯವರೇ ಸರಕಾರದ ಪರವಾಗಿ ಗುನ್ನೆ 3/2000-01 ರಲ್ಲಿ ಫಿರ್ಯಾದನ್ನು ದಾಖಲಿಸಿಕೊಂಡಿರುತ್ತಾರೆ. ಫಿರ್ಯಾದನ್ನು ಪ್ರಥಮ ವರ್ತಮಾನ ವರದಿಯೊಂದಿಗೆ ಸಂಬಂಧಿಸಿದ ನ್ಯಾಯಾಲಯಕ್ಕೆ ಕಳುಹಿಸಿದ್ದಾರೆ. ಫಿರ್ಯಾದಿಯ ದೃಢೀಕೃತ ಪ್ರತಿಯನ್ನು ನಿಪಿ-2 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-2ಎ ಅಂತಾ ಗುರುತಿಸಿದೆ. ಪ್ರಥಮ ವರ್ತಮಾನ ವರದಿಯ ದೃಢೀಕೃತ ಪ್ರತಿಯನ್ನು ನಿಪಿ-3 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-3ಎ ಅಂತಾ ಗುರುತಿಸಿದೆ. ವಾಹನ ಶೋಧನೆ ಮಾಡಿದ ಬಗ್ಗೆ ಮಾನ್ಯ ನ್ಯಾಯಾಲಯಕ್ಕೆ ಕಾರಣಗಳನ್ನು ನಮೂದಿಸಿ ವರದಿ ಸಲ್ಲಿಸಿದ್ದಾರೆ. ಅದರ ಪ್ರತಿಯನ್ನು ನಿಪಿ-4 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-4ಎ ಅಂತಾ ಗುರುತಿಸಿದೆ. ಮಾನ್ಯ ಅಧಿಕೃತ ಅಧಿಕಾರಿಯವರಿಗೆ ಸ್ವತ್ತಿನಪಟ್ಟಿ ವಿವರಗಳನ್ನು ಸಲ್ಲಿಸಿ ತನಿಖೆ ಮುಗಿಯುವವರೆಗೆ ಜಪ್ತಾದ ವಸ್ತುಗಳನ್ನು ವಶದಲ್ಲಿಟ್ಟುಕೊಳ್ಳಲು ಅನುಮತಿ ಪಡೆದಿದ್ದಾರೆ. ಅದನ್ನು ನಿಪಿ-5 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-5ಎ ಅಂತಾ ಗುರುತಿಸಿದೆ. ಮಾದರಿ ಕಳ್ಳಭಟ್ಟಿ ಸಾರಾಯಿ ಬಾಟ್ಲಿಗಳನ್ನು ರಸಾಯನಿಕ ಪರೀಕ್ಷೆಗಾಗಿ ಶ್ರೀ ಎಂ. ಎಂ. ಕ್ಯಾತನವರ, ಅ.ರ. ಮುಖಾಂತರ ದಿನಾಂಕ: 25.08.2000 ರಂದು ಬೆಂಗಳೂರಿಗೆ ಕಳುಹಿಸಿಕೊಟ್ಟು ದಿನಾಂಕ: 29.08.2000 ರಂದು ರಾಸಾಯನಿಕ ಪರೀಕ್ಷೆ ಪ್ರಮಾಣ ಪತ್ರವನ್ನು ಪಡೆದುಕೊಂಡಿದ್ದಾರೆ. ಅದರ ದೃಢೀಕೃತ ಪ್ರತಿ ನಿಪಿ-6 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-6ಎ ಅಂತಾ ಗುರುತಿಸಿದೆ. ಜಪ್ತಾದ ಕಳ್ಳಭಟ್ಟಿ ಸಾರಾಯಿಯಲ್ಲಿ ಇಥೈಲ್ ಆಲ್ಕೋಹಾಲ್ ಇದ್ದ ಬಗ್ಗೆ ಮತ್ತು ಅದು ಮಾನವ ಸೇವನೆಗೆ ಯೋಗ್ಯವಾಗಿಲ್ಲ ಎಂದು ಪ್ರಮಾಣ ಪತ್ರದಲ್ಲಿ ನಮೂದಾಗಿರುತ್ತದೆ. ದಿನಾಂಕ:

31.08.2000 ರಂದು ಆರ್.ಟಿ.ಓ., ಕೊಲ್ಹಾಪೂರ ಇವರಿಗೆ ಜಪ್ತಾದ ವಾಹನದ ಬಗ್ಗೆ ಮಾಲೀಕರ ವಿವರಗಳನ್ನು ತಿಳಿಸುವಂತೆ ವಿನಂತಿಸಿ ಪತ್ರ ಬರೆದುಕೊಂಡಿದ್ದಾರೆ. ಸದರಿ ಪತ್ರದ ಕಛೇರಿ ಪ್ರತಿಯನ್ನು ನಿಪಿ-7 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-7ಎ ಅಂತಾ ಗುರುತಿಸಿದೆ. ಆರ್.ಟಿ.ಓ., ಕೊಲ್ಹಾಪೂರ ಇವರಿಂದ ಟ್ರ್ಯಾಕ್ಟರ್ ಮತ್ತು ಟ್ರೇಲರ್‌ಗಳ ಬಗ್ಗೆ ವಿವರಗಳು 18.09.2000 ರಂದು ತಲುಪಿದ್ದು, ಅವುಗಳನ್ನು ನಿಪಿ-8, 9 ಮತ್ತು ಅದರಲ್ಲಿಯ ಅವರ ಸಹಿಯನ್ನು ನಿಪಿ-8ಎ, 9ಎ ಅಂತಾ ಗುರುತಿಸಿದೆ. ಅವುಗಳಲ್ಲಿ ಬರೆದ ವಿವರಗಳ ಪ್ರಕಾರ ಎಂಹೆಚ್-09-ಯು-747 ಹಾಗೂ ಎಂಹೆಚ್-09- ಯು-748 ಇವೆರೆಡು ಟ್ರ್ಯಾಕ್ಟರ್ ಮತ್ತು ಟ್ರೇಲರಗಳು ಇರುತ್ತವೆ. ಎಂಹೆಚ್-09-ಯು-747 ನೇದ್ದ ಮಾಲೀಕರು ಶ್ರೀಕಾಂತ ಬಿ.ಚೌಗಲೆ, ಸಾ: ಶ್ರೀರಟ್ಟಿ, ತಾ: ಶಿರೋಳ, ಜಿಲ್ಲಾ: ಕೊಲ್ಹಾಪೂರ ಮತ್ತು ಎಂಹೆಚ್-09-ಯು-748 ಇದರ ಮಾಲೀಕರು ಗಣಪತಿ ಆರ್. ಜಾಧವ, ಸಾ: ಕಡವೆ, ತಾ: ಶಾಹೂವಾಡಿ, ಜಿಲ್ಲಾ: ಕೊಲ್ಹಾಪೂರ ಅಂತಾ ತಿಳಿದು ಬಂದಿರುತ್ತದೆ. ಮೇಲ್ಕಂಡ ಸಂಗತಿಗಳ ಬಗ್ಗೆ ಅವರು ಮಾನ್ಯ ಅಧಿಕೃತ ಅಧಿಕಾರಿಯವರ ಗಮನಕ್ಕೆ ತಂದಿರುತ್ತಾರೆ. ಮಾನ್ಯ ಅಧಿಕೃತ ಅಧಿಕಾರಿಯವರು ದಿನಾಂಕ: 20.11.2000 ರಂದು ಆರ್.ಟಿ.ಓ, ಕೊಲ್ಹಾಪೂರ ಇವರಿಗೆ ಪತ್ರ ಬರೆದು ಈ ಬಗ್ಗೆ ಅಂದರೆ ಜಪ್ತಾದ ಟ್ರ್ಯಾಕ್ಟರ್ ಮಾಲಿಕತ್ವದ ಬಗ್ಗೆ ಸ್ಪಷ್ಟೀಕರಣ ಕೇಳಿದ್ದು, ಅದಕ್ಕೆ ಉತ್ತರವನ್ನು ಸ್ಪಷ್ಟೀಕರಣವನ್ನು ಆರ್.ಟಿ.ಓ., ಕೊಲ್ಹಾಪೂರ ಇವರು ತಮ್ಮ ಪತ್ರ ದಿನಾಂಕ: 6.12.2000 ರಲ್ಲಿ ನೀಡಿರುತ್ತಾರೆ. ಸದರಿ ಸ್ಪಷ್ಟೀಕರಣ ಪತ್ರವನ್ನು ನಿಪಿ-10 ಅಂತಾ ಗುರುತಿಸಿದೆ. ಅದರಲ್ಲಿಯ ವಿವರಗಳ ಪ್ರಕಾರ ಟ್ರ್ಯಾಕ್ಟರ್ ಎಂಜಿನ್ ನಂ. 52128206899 ಚಾಸ್ಸಿ ನಂ. 12211874820 ನೇದ್ದರ ರಿಜಿಸ್ಟರ್ ನಂ. ಎಂಹೆಚ್-09-ಯು-4850 ಇದ್ದು ಅದರ ಮಾಲೀಕರ ಹೆಸರು ಮಾರುತಿ ನಾಗೋಜಿ ಖಾಂಡೇಕರ, ಸಾ: ಶೊನ್ನೋಳಿ, ತಾ: ಚಂದಗಡ, ಜಿಲ್ಲೆ: ಕೊಲ್ಹಾಪೂರ ಇದ್ದು ಸದರಿ ವಾಹನ ಅವರ ಹೆಸರಿನಲ್ಲಿ 29.09.99 ರಿಂದ ನೋಂದಾಯಿತವಾಗಿರುತ್ತದೆ. ಇದೇ ವಾಹನವನ್ನು ಸದರಿಯವರು ಜಪ್ತಿ ಮಾಡಿದ್ದು, ಅವರು ಜಪ್ತಿ ಮಾಡಿದಾಗ ಅದಕ್ಕೆ ಹಚ್ಚಿದ್ದ ನಂಬರ್ ಪ್ಲೇಟ್ ಎಂಹೆಚ್-09-ಯು-747 ಅಂತಾ ಬರೆದಿದ್ದರಿಂದ ಅವರು ಅದೇ ನಂಬರನ್ನು ಪಂಚನಾಮೆಯಲ್ಲಿ ಮತ್ತು ಫಿರ್ಯಾದು ಎಫ್.ಐ.ಆರ್. ನಲ್ಲಿ ನಮೂದು ಮಾಡಿರುತ್ತಾರೆ. ಅದೇ ರೀತಿ ಟ್ರೇಲರ್ ನಂ. ಎಂಹೆಚ್-09-ಯು-748 ಇದು ಗಣಪತಿ ಆರ್. ಜಾಧವ, ಸಾ: ಕಡವೆ, ತಾ: ಶಾಹೂವಾಡಿ, ಜಿಲ್ಲಾ: ಕೊಲ್ಹಾಪೂರ ಇದ್ದ ಬಗ್ಗೆ ನಿಪಿ-10 ರಿಂದ ಕಂಡುಬರುತ್ತದೆ. ಇದರಿಂದ ಟ್ರ್ಯಾಕ್ಟರ್ ನಂ. ಎಂಹೆಚ್-09-ಯು-4850 ನೇದ್ದರ ನಂಬರ್ ಪ್ಲೇಟ್ ಬದಲಾವಣೆ ಮಾಡಿ ಅದಕ್ಕೆ ಎಂಹೆಚ್-09-ಯು-747 ಸುಳ್ಳು ನಂಬರ್ ಪ್ಲೇಟ್ ಹಚ್ಚಿ ಅಪರಾಧಿಗಳು ಈ ಗುನ್ಹೆಯನ್ನು ಮಾಡಿದ್ದು ತನಿಖೆಯಲ್ಲಿ ಖಚಿತ ಪಟ್ಟಿರುತ್ತದೆ. ಕೊಲ್ಹಾಪೂರ ಆರ್.ಟಿ.ಓ, ಇವರ ಪತ್ರ ನಿಪಿ-10ರ ಪ್ರಕಾರ ಜಪ್ತಾದ ಟ್ರ್ಯಾಕ್ಟರ್‌ನ ಮಾಲೀಕರು ಮಾರುತಿ ನಾಗೋಜಿ ಖಾಂಡೇಕರ ಇವರು ಮಾನ್ಯ ಸತ್ರ ನ್ಯಾಯಾಲಯ, ಬೆಳಗಾಂವ ಇವರ ಆದೇಶದಂತೆ (ಕ್ರಿಮಿನಲ್ ಅಪೀಲ್ ನಂ. 49/2000 ದಿನಾಂಕ: 09.01.2001) ಅರ್ಜಿದಾರ ಮಾರುತಿ ನಾಗೋಜಿ ಖಾಂಡೇಕರ ಇವರಿಗೆ ಮಧ್ಯಂತರ ವಶಕ್ಕೆ ಕೊಟ್ಟಿರುತ್ತಾರೆ. ಟ್ರೇಲರ್ ನಂ. ಎಂಹೆಚ್-09-ಯು-748 ನೇದ್ದು ಶ್ರೀ ಗಣಪತಿ ಆರ್. ಜಾಧವ, ಸಾ: ಕಡವೆ, ತಾ: ಶಾಹೂವಾಡಿ, ಜಿಲ್ಲಾ: ಕೊಲ್ಹಾಪೂರ ಇವರ ಹೆಸರಿನಲ್ಲಿ ನೋಂದಾಯಿತವಾಗಿದ್ದರಿಂದ ಅವರಿಗೆ ಪ್ರಾಧಿಕಾರದಿಂದ ಕಾರಣ ಕೇಳಿ ನೋಟಿಸನ್ನು ನೀಡಲಾಗಿತ್ತು ಸದರಿಯವರು ದಿನಾಂಕ: 09.10.2001 ರಂದು ಪ್ರಾಧಿಕಾರಕ್ಕೆ ಪತ್ರ ಬರೆದು ಸದರಿ ನಂಬರಿನ ಟ್ರೇಲರ್ ತಮಗೆ ಸೇರಿದ್ದು, ಅದು ತಮ್ಮ ವಶದಲ್ಲಿಯೇ ಇರುತ್ತದೆ, ಈ ಪ್ರಕರಣದಲ್ಲಿ ಜಪ್ತಾಗಿರುವ ಟ್ರೇಲರ್ ತಮಗೆ ಸಂಬಂಧಿಸಿರುವುದಿಲ್ಲ ಎಂದು ತಿಳಿಸಿರುತ್ತಾರೆ. ಇದರಿಂದ ಈ ಪ್ರಕರಣದಲ್ಲಿ ಜಪ್ತಾದ ಟ್ರೇಲರ್‌ಗೆ ಅಪರಾಧಿಗಳು ಅಪರಾಧ ಮಾಡುವ ಉದ್ದೇಶದಿಂದ ಸುಳ್ಳು ನಂಬರ್ ಪ್ಲೇಟ್ ಹಚ್ಚಿದ ಬಗ್ಗೆ ಸ್ಪಷ್ಟವಾಗುತ್ತದೆ. ಸದರಿ ಜಪ್ತಾದ ಟ್ರೇಲರ ಇಲಾಖೆಯ ವಶದಲ್ಲಿರುತ್ತದೆ.

ದಿನಾಂಕ: 17.10.2000 ರಂದು ಮಾನ್ಯ ಅಧಿಕೃತ ಅಧಿಕಾರಿಯವರಿಗೆ ಅವರು ಎರಡು ಪತ್ರಗಳನ್ನು ಬರೆದು ಜಪ್ತಾಗಿರುವ ಕಳ್ಳಭಟ್ಟಿ ಸಾರಾಯಿ ತುಂಬಿದ ಮೋಟಾರ್ ಟ್ಯೂಬ್‌ಗಳನ್ನು (ಮಾದರಿ ಹೊರತುಪಡಿಸಿ) ನಾಶಪಡಿಸಲು ಮುಟ್ಟುಗೋಲು ಆದೇಶ ಹೊರಡಿಸುವಂತೆ ಮತ್ತು ಜಪ್ತಾದ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶ ಮಾಡುವಂತೆ ವಿನಂತಿಸಿಕೊಂಡಿದ್ದಾರೆ. ಅವರ ಜೊತೆಗೆ ಬಂದಿದ್ದ ಸಿಬ್ಬಂದಿ ಎಸ್.ಬಿ. ಉಣಕಲ್, ಅ.ರ. ಈತನ ಹೇಳಿಕೆ ಪಡೆದುಕೊಂಡಿದ್ದಾರೆ. ಮತ್ತು ಮಾದರಿ ಸಾರಾಯಿ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಯಿದ ಶ್ರೀ ಕ್ಯಾತನವರ, ಅ.ರ ಇವರ ಹೇಳಿಕೆ ಪಡೆದುಕೊಂಡಿದ್ದಾರೆ. ಜಪ್ತಾದ ಟ್ರ್ಯಾಕ್ಟರ್‌ನ ಚಾಲಕ ಸುರೇಶ ಜೋತಿಬಾ ತುಡೇಕರ, ಸಾ: ಸಿನ್ನೋಳ್ಳಿ ಮತ್ತು ಜಪ್ತಾದ ಟ್ರ್ಯಾಕ್ಟರ್ ಮಾಲೀಕ ಮಾರುತಿ ನಾಗೋಜಿ ಖಾಂಡೇಕರ ಇವರನ್ನು ದಿನಾಂಕ: 18.03.2002 ರಂದು ದಸ್ತಗಿರಿ ಮಾಡಿ ಅವಧಿಯಲ್ಲಿ ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ. ಮತ್ತು ಈ ಬಗ್ಗೆ ಮಾನ್ಯ ನ್ಯಾಯಾಲಯಕ್ಕೆ ವರದಿ ಸಲ್ಲಿಸಿದ್ದಾರೆ. ತನಿಖೆ ಸಂಪೂರ್ಣಗೊಳಿಸಿ ಮಾನ್ಯ ನ್ಯಾಯಾಲಯಕ್ಕೆ ವಾಹನದ ಚಾಲಕ, ಮಾಲೀಕ ಇವರ ವಿರುದ್ಧ ದೋಷಾರೋಪಣೆ ಪತ್ರವನ್ನು ದಿನಾಂಕ: 15.05.2002 ರಂದು ಸಲ್ಲಿಸಿದ್ದಾರೆ. ಅದು ವಿಚಾರಣೆಯಲ್ಲಿರುತ್ತದೆ. ಅದರ ಸಿಸಿ ನಂ. 495/02 ಇರುತ್ತದೆ. ಮೂಲ ದಾಖಲೆಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದಾರೆ. ಅವರ ತನಿಖೆಯಲ್ಲಿ ಜಪ್ತಾದ ಟ್ರ್ಯಾಕ್ಟರ್ ಮಾಲೀಕರ ಫಾಯದೆಗಾಗಿ ಅವರ ಸಮ್ಮತಿಯಿಂದ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಟ ಮಾಡಿರುವುದು ಖಚಿತಪಟ್ಟಿರುತ್ತದೆ. ಜಪ್ತಾದ ಟ್ರ್ಯಾಕ್ಟರ್ ಹಾಗೂ ಟ್ರೇಲರ್‌ಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವಿನಂತಿಸಿಕೊಂಡಿದ್ದಾರೆ.

ಸದರಿಯವರನ್ನು ವಾಹನ ಮಾಲೀಕರ ಪರ ವಕೀಲರು ಪಾಟೀ ಸವಾಲು ಮಾಡಿರುತ್ತಾರೆ. ಪಾಟೀ ಸವಾಲಿನಲ್ಲಿ ಅವರು ಘಟನೆ ನಡೆದ ದಿನ ಅವರು ತಮ್ಮ ಇಲಾಖೆಯ ಇತರ ನಾಲ್ಕು ಜನರೊಂದಿಗೆ ಖಾಸಗಿ ವಾಹನದಲ್ಲಿ ಘಟನಾ ಸ್ಥಳಕ್ಕೆ ಹೋಗಿದ್ದು, ಅವರು ಕಛೇರಿಯನ್ನು ಬಿಟ್ಟಾಗ ಮುಂಜಾನೆ 10.30 ಆಗಿತ್ತು, ಅವರು ಗಣೇಶಪೂರ ಕ್ರಾಸ್‌ಗೆ ಹೋದಾಗ 11.35 ಆಗಿತ್ತು, ಅವರು ಆ ದಿನ ಜಪ್ತಾದ ವಾಹನ ಬಿಟ್ಟು ಬೇರೆ ಯಾವುದೇ ವಾಹನ ತಪಾಸಣೇ ಮಾಡಿರುವುದಿಲ್ಲ. ಘಟನಾ ಸ್ಥಳ ಊರ ಹೊರಗೆ ಇದ್ದುದರಿಂದ ಅಲ್ಲಿ ವಾಸದ ಮನೆ, ಹೋಟೆಲ್, ಇತ್ಯಾದಿ ಇರುವುದಿಲ್ಲ. ಈ ಪ್ರಕರಣದಲ್ಲಿ ಅವರು ವಾಹನ ಜಪ್ತಿ ಮಾಡುವ ಕಾಲದಲ್ಲಿ ರಸ್ತೆಯಲ್ಲಿ ಜನ ಸಂಚಾರ ಇತ್ತು, ಅವರು ಯಾವುದೇ ಜನರ ಹೇಳಿಕೆಗಳನ್ನು ಬರೆದುಕೊಂಡಿರುವುದಿಲ್ಲ. ಅವರು ಜಪ್ತಾದ ವಾಹನವನ್ನು ಮೊದಲಿಗೆ 200 ರಿಂದ 300 ಮೀಟರ್ ದೂರದಲ್ಲಿದ್ದಾಗ ನೋಡಿದ್ದು, ವಾಹನ ಜಪ್ತಿ ಮಾಡುವಲ್ಲಿ ಶೋಧ ಮಾಡಲು ನ್ಯಾಯಾಲಯದಿಂದ ಮೊದಲೇ ವಾರಂಟ್

ಪಡೆದಿರಲಿಲ್ಲ ಅವರಿಗೆ ಅವಶ್ಯ ಕಾಲಾವಧಿ ಇರಲಿಲ್ಲ, ಈ ಬಗ್ಗೆ ಕಾರಣಗಳನ್ನು ಪಂಚನಾಮೆ ಮತ್ತು ಫಿರ್ಯಾದಿನಲ್ಲಿ ನಮೂದಿಸಿಲ್ಲ ಅಂದರೆ ನಿಜ, ಅವರು ಜಪ್ತಿ ಮಾಡುವ ಕಾಲದಲ್ಲಿ ಟ್ರ್ಯಾಕ್ಟರ್, ಟ್ರೇಲರ್‌ಗಳಲ್ಲಿ ಯಾವುದೇ ಕಾಗದ ಪತ್ರಗಳು ಸಿಕ್ಕಿರುವುದಿಲ್ಲ. ಅವರು ಗುನ್ನೆ ಜಾಗೆಯಲ್ಲಿ ಯಾವುದೇ ಪಂಚನಾಮೆ ಮಾಡಿಲ್ಲ ಅಂದರೆ ಸರಿಯಲ್ಲ, ಪಂಚರು ಅವರ ಖಾಯಂ ಪಂಚರೆಂದರೆ ಸರಿಯಲ್ಲ, ಪ್ರಕರಣಕ್ಕೆ ಅನುಕೂಲವಾಗುವಂತೆ ಅವರು ಕಛೇರಿಯಲ್ಲಿ ಕುಳಿತು ಕಾಗದ ಪತ್ರಗಳನ್ನು ತಯಾರು ಮಾಡಿದ್ದಾರೆ ಎಂದರೆ ಸರಿಯಲ್ಲ. ನಿಪಿ-5 ರಲ್ಲಿ ಅಧಿಕೃತ ಅಧಿಕಾರಿಗಳು ದಿನಾಂಕ: 24.08.2000 ರಂದು ಅನುಮತಿ ನೀಡಿರುತ್ತಾರೆ. ಜಪ್ತಾದ ನಂತರ 24.08.2000 ರ ವರೆಗೆ ಜಪ್ತಾದ ವಸ್ತುಗಳು ಅವರ ತಾಬಾದಲ್ಲಿದ್ದವು. ಅವರು ಘಟನೆ ಸ್ಥಳಕ್ಕೆ ಹೋಗಲು ಉಪಯೋಗಿಸಿದ ಖಾಸಗಿ ವಾಹನದ ಚಾಲಕನ ಹೇಳಿಕೆ ಪಡೆದುಕೊಂಡಿರುವುದಿಲ್ಲ. ಮತ್ತು ಸದರಿ ವಾಹನದ ನಂಬರ್ ನೆನಪಿಲ್ಲ, ಜಪ್ತಾದ ಟ್ರ್ಯಾಕ್ಟರ್ ಮೇಲೆ ಬೆಳಗಾಂವ ಆರ್.ಟಿ.ಓ ರವರ ತಾತ್ಪೂರ್ತಿಕ ನೋಂದಣಿ ನಂಬರ ಇತ್ತು ಎಂದರೆ ಸರಿಯಲ್ಲ ಜಪ್ತಾದ ವಾಹನಗಳಿಗೆ ಸುಳ್ಳು ನಂಬರ್ ಪ್ಲೇಟ್‌ಗಳನ್ನು ಹಚ್ಚಿದ್ದರು, ಅವರು ಸುಳ್ಳು ಹೇಳುತ್ತಿದ್ದಾರೆ ಎಂದರೆ ಸರಿಯಲ್ಲ. ಘಟನೆಯ ದಿನ, ಘಟನೆ ಸ್ಥಳದಲ್ಲಿ ಜಪ್ತಾದ ವಾಹನ ಇರಲಿಲ್ಲ ಅಂದರೆ ಸರಿಯಲ್ಲ, ಅದರಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಟ ಮಾಡುತ್ತಿರಲಿಲ್ಲ ಅಂದರೆ ಸರಿಯಲ್ಲ, ಜಪ್ತಾದ ಟ್ರೇಲರ್ ತಮ್ಮದೆಂದು ಪ್ರಾಧಿಕಾರದ ಮುಂದೆ ಯಾರೂ ಇದೂವರೆಗೆ ಕೇಳಿಕೊಂಡು ಬಂದಿರುವುದಿಲ್ಲ ಅಂದರೆ ಸರಿಯಲ್ಲ, ದಿನಾಂಕ: 31.08.2000 ರಂದು ಕುಮಾರಿ ಎಸ್.ಆರ್. ನಾಯ್ಡು ಅನ್ನುವ ವಕೀಲರು ಪ್ರಾಧಿಕಾರದ ಮುಂದೆ ಜಪ್ತಾದ ಟ್ರ್ಯಾಕ್ಟರ್ ಮತ್ತು ಟ್ರೇಲರ್‌ಗಳನ್ನು ಅರ್ಜಿದಾರ ಪರಶುರಾಮ ಮಾರುತಿ ಖಾಂಡೇಕರ ಇವರ ಮಧ್ಯಂತರ ವಶಕ್ಕೆ ಕೊಡುವಂತೆ ಮಾರುತಿ ನಾಗೋಜಿ ಖಾಂಡೇಕರ ಇವರ ಪರವಾಗಿ ಅರ್ಜಿಯನ್ನು ಸಲ್ಲಿಸಿದ್ದರು. ಅದನ್ನು ಪ್ರಾಧಿಕಾರವು ತಿರಸ್ಕರಿಸಿರುತ್ತದೆ. ಜಪ್ತಾದ ಟ್ರ್ಯಾಕ್ಟರಿಗೂ ಮತ್ತು ಜಪ್ತಾದ ಟ್ರೇಲರಿಗೂ ಸಂಬಂಧವಿಲ್ಲ ಎನ್ನುವುದು ಸರಿಯಲ್ಲ, ಸಾರಾಯಿ ಗುತ್ತಿಗೆದಾರರ ಒತ್ತಾಯದಿಂದ ಜಪ್ತಾದ ಟ್ರ್ಯಾಕ್ಟರ್ ತಂದು ಕೊಟ್ಟಿದ್ದಾರೆ ಎಂದರೆ ಸರಿಯಲ್ಲ. ಜಪ್ತಾದ ಟ್ರ್ಯಾಕ್ಟರಿಗೂ ಈ ಪ್ರಕರಣಕ್ಕೂ ಯಾವುದೇ ಸಂಬಂಧವಿಲ್ಲ ಎಂದರೆ ಸರಿಯಲ್ಲ ವಾಹನದ ಮಾಲೀಕನ ವಿರುದ್ಧ ಅವರು ಸುಳ್ಳು ದೋಷಾರೋಪಣೆ ಪತ್ರ ಸಲ್ಲಿಸಿದ್ದಾರೆ ಎಂದರೆ ಸರಿಯಲ್ಲ, ಅಂಕಿ ಸಂಖ್ಯೆಗಾಗಿ ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಕೇಸು ಹಾಕಿದ್ದಾರೆಂದರೆ ಸರಿಯಲ್ಲ. ಟ್ರ್ಯಾಕ್ಟರ್ ಮಾಲೀಕರು ಯಾವುದೇ ಸುಳ್ಳು ನಂಬರ್ ಪ್ಲೇಟ್ ಉಪಯೋಗ ಮಾಡಿರುವುದಿಲ್ಲ ಎಂದರೆ ಸರಿಯಲ್ಲ ಎಂದು ಉತ್ತರಿಸಿದ್ದಾರೆ. ಇದರಿಂದ ವಾಹನ ಮಾಲೀಕರ ಪರ ವಕೀಲರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬಂದಿರುವುದಿಲ್ಲ.

ಪ್ರಾ.ಸಾ-1 ಮತ್ತು ಪ್ರಾ.ಸಾ-2 ಇವರ ಹೇಳಿಕೆ ಮೇರೆಗೆ ದಿನಾಂಕ: 21.08.2000 ರಂದು ಟ್ರ್ಯಾಕ್ಟರ್ ಮತ್ತು ಟ್ರೇಲರನಲ್ಲಿ 10 ಕಳ್ಳಭಟ್ಟಿ ಸಾರಾಯಿ ಟ್ಯೂಬ್‌ಗಳ ಸಾಗಾಟವಾಗಿದೆ ಎಂದು ಸಿದ್ದವಾಗಿರುತ್ತದೆ. ಆದ್ದರಿಂದ ಒಂದನೆಯ ಪ್ರಶ್ನೆಗೆ ಉತ್ತರ ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಶ್ರೀ ಮಾರುತಿ ನಾಗೋಜಿ ಖಾಂಡೇಕರ, ಶಿನೋಳ್ಳಿ ಇವರು ಸದರಿ ಜಪ್ತಾದ ವಾಹನದ ಮಾಲೀಕರಿದ್ದು ದಿನಾಂಕ: 19.06.2003 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ಡಿ.ಡಬ್ಲ್ಯೂ-1 ಆಗಿ ನೀಡಿರುತ್ತಾರೆ. ಸದರಿಯವರು ಜಪ್ತಾದ ವಾಹನದ ಆರ್.ಸಿ. ಪುಸ್ತಕವನ್ನು ಹಾಜರುಪಡಿಸಿದ್ದಾರೆ. ಟ್ರ್ಯಾಕ್ಟರ್‌ನ್ನು ಶೇತಕರಿ ಸೊಸೈಟಿ ಶಿನೋಳಿಯಿಂದ ಲೋನ ತೆಗೆದುಕೊಂಡು ಖರೀದಿಸಿದ್ದಾರೆ. ಅವರು ಸದರಿ ಟ್ರ್ಯಾಕ್ಟರ್‌ನ್ನು ಅವರ ಸ್ವಂತ ಶೇತಗಿ ಕೆಲಸಕ್ಕೆ ಉಪಯೋಗಕ್ಕೆ ಮಾಡುತ್ತಿದ್ದು, ಸುರೇಶ ಡ್ರೈವರ್‌ನ್ನು ನೇಮಿಸಿಕೊಂಡಿದ್ದಾಗಿ ತಿಳಿಸಿದ್ದಾರೆ. ಅವರು ಸದರಿ ಟ್ರ್ಯಾಕ್ಟರ್‌ನ್ನು ಶೇತಕಿ ಕೆಲಸ ಬಿಟ್ಟು ಬೇರೆ ಯಾವುದೇ ಕೆಲಸ ಮಾಡಬಾರದೆಂದು ಹೇಳಿದ್ದು, ದಿನಾಂಕ: 21.08.2000 ರಂದು ಟ್ರ್ಯಾಕ್ಟರ್ ಸಂಜೆ ವೇಳೆಗೆ ಮನೆಗೆ ಹಿಂದಿರುಗಲಿಲ್ಲ. ಎರಡು ದಿನಗಳ ನಂತರ ಟ್ರ್ಯಾಕ್ಟರ್ ಅಬಕಾರಿ ಇಲಾಖೆಯಲ್ಲಿದೆ ಎಂದು ಗೊತ್ತಾಗಿದ್ದು, ಅವರಿಗೆ ಕಳ್ಳಭಟ್ಟಿ ಸಾರಾಯಿ ಸಿಕ್ಕಿದ್ದು ತಮಗೆ ಗೊತ್ತಿರುವುದಿಲ್ಲವೆಂದು ತಿಳಿಸಿದ್ದಾರೆ. ಡ್ರೈವರನು ಕೂಡ ಏನು ಹೇಳಿರುವುದಿಲ್ಲ, ತಾವು ಅಬಕಾರಿ ಕಾಯ್ದೆ ಉಲ್ಲಂಘನೆ ಮಾಡಿರುವುದಿಲ್ಲ, ಪ್ರತಿ ದಿವಸ ಟ್ರ್ಯಾಕ್ಟರ್ ಮುಂಜಾನೆ ಹೋಗಿ ರಾತ್ರಿ ವೇಳೆಗೆ ಮನೆಗೆ ಬಂದು ನಿಲ್ಲುತ್ತದೆ. ಸದರಿ ಪ್ರಾಧಿಕಾರದ ಮುಂದೆ ಅವರ ಟ್ರ್ಯಾಕ್ಟರ್‌ನ್ನು ಮರಳಿ ಕೊಡಬೇಕೆಂದು ಕೋರಿರುತ್ತಾರೆ. ಜಪ್ತಾದ ಟ್ರೇಲರಿಗೂ ಅವರಿಗೂ ಯಾವ ಸಂಬಂಧ ಇರುವುದಿಲ್ಲ ಮತ್ತು ಅದನ್ನು ತಮಗೆ ಕೊಡಲು ಕೇಳಿಕೊಂಡಿರುವುದಿಲ್ಲ.

ಸದರಿಯವರನ್ನು ಮಾನ್ಯ ಎ.ಡಿ.ಪಿಯವರು ಪಾಟೀ ಸವಾಲು ಮಾಡಿದ್ದು, ಅದರಲ್ಲಿ ಅವರಿಗೆ ಜಪ್ತಾದ ಟ್ರ್ಯಾಕ್ಟರದ ನಂಬರು ಹೇಳಲು ಬರುವುದಿಲ್ಲ, ಅವರ ಟ್ರ್ಯಾಕ್ಟರ್ ನಂಬರು ಸಹ ಹೇಳಲು ಬರುವುದಿಲ್ಲ. ಅವರ ಟ್ರ್ಯಾಕ್ಟರ್ ನಂಬರ್ ಪ್ಲೇಟ್‌ನ್ನು ಬದಲಾಯಿಸಿ ಬೇರೆ ನಂಬರ್ ಪ್ಲೇಟ್ ಯಾರು ಹಚ್ಚಿರುತ್ತಾರೆ ಹೇಳಲು ಬರುವುದಿಲ್ಲ. ಅವರೇ ಅವರ ಟ್ರ್ಯಾಕ್ಟರ್ ನಂಬರ್ ಪ್ಲೇಟ್ ಬದಲಾಯಿಸಿ ಬೇರೆ ನಂಬರ ಪ್ಲೇಟ್ ಹಚ್ಚಿ ಅದನ್ನು ಅಕ್ರಮ ಸಾರಾಯಿ ಸಾಗಾಟ ಮಾಡಲು ಉಪಯೋಗಿಸಿದ್ದೇನೆ ಎಂದರೆ ಸರಿಯಲ್ಲ ಎಂದು ತಿಳಿಸಿದ್ದಾರೆ. ತಮ್ಮ ಫಾಯದೆಗಾಗಿ ಅದರ ನಂಬರ್ ಪ್ಲೇಟ್ ಬದಲಾಯಿಸಿ ಚಾಲಕನಿಗೆ ಕೊಟ್ಟು ಅದರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡಿಸಿರುವುದರಿಂದ ಅವರ ಟ್ರ್ಯಾಕ್ಟರ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎಂದರೆ ಸರಿಯಲ್ಲ, ಈ ಪ್ರಕರಣದಲ್ಲಿ ಅವರನ್ನು ಆರೋಪಿ ಮಾಡಿ ದೋಷಾರೋಪಣೆ ಪತ್ರವನ್ನು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಸಲ್ಲಿಸಲಾಗಿದೆ ಎನ್ನುವುದು ಸರಿ, ಟ್ರ್ಯಾಕ್ಟರನ್ನು ನಂಬರ್ ಪ್ಲೇಟನ್ನು ಬದಲಾಯಿಸದಂತೆ ನೋಡಿಕೊಳ್ಳುವುದು ತಮ್ಮ ಜವಾಬ್ದಾರಿಯಾಗಿದೆ ಎಂದರೆ ಸರಿ, ತಾವು ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸಿಲ್ಲ, ಆದ್ದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎಂದರೆ ಸರಿಯಲ್ಲ, ಅವರು ಯಾವ ತಾರೀಖು ವಾಹನವನ್ನು ಚಾಲಕನಿಗೆ ವಹಿಸಿಕೊಟ್ಟಿದ್ದೆ ಎಂದು ಹೇಳಲು ಈಗ ಬರುವುದಿಲ್ಲ, ವಾಹನವು ಜಪ್ತಾದ ದಿನ ಗುನ್ನೆ ಜಾಗೆಗೆ ಬಂದಿತ್ತು ಎಂದು ಹೇಳಲು ಅವರಿಗೆ ಬರುವುದಿಲ್ಲ, ಅವರು ಅಪರಾಧದಲ್ಲಿ ಭಾಗಿಯಾಗಿರುತ್ತೇನೆ ಎಂದರೆ ಸರಿಯಲ್ಲ ಎಂದು ತಿಳಿಸಿದ್ದಾರೆ.

ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ಸಿದ್ದಪಡಿಸುವ ಜವಾಬ್ದಾರಿ ವಾಹನದ ನೋಂದಾಯಿತ ಮಾಲೀಕರ ಮೇಲಿರುತ್ತದೆ. ವಾಹನ ಮಾಲೀಕರು ತಮ್ಮ ಗಮನಕ್ಕೆ ಬಾರದೇ ಈ ಕೃತ್ಯ ನಡೆದಿದೆ ಎಂದು ನಿರೂಪಿಸಲು ವಿಫಲರಾಗಿರುತ್ತಾರೆ. ಅಲ್ಲದೇ ಸ್ವತಃ ಟ್ರ್ಯಾಕ್ಟರ್ ಮಾಲೀಕರೇ ತಮ್ಮ ಸ್ವಂತ ಲಾಭಕ್ಕಾಗಿ ಬೇರೆಯವರಿಗೆ ಸಂಬಂಧಿಸಿದ ಟ್ರೇಲರ್ ನಂಬರನ್ನು ತಮ್ಮ ಟ್ರ್ಯಾಕ್ಟರ್‌ಗೆ

ನಮೂದಿಸಿದ ಕಳ್ಳಭಟ್ಟಿ ಸಾಗಾಣಿಕೆ ಮಾಡಿದ್ದು ಇದು ವಾಹನ ಮಾಲೀಕರ ಕುಮ್ಮಕ್ಕಿನಿಂದಲೇ ಮಾಡಿದ್ದಾರೆ ಎಂದು ಸಿದ್ದಪಟ್ಟಿರುವುದರಿಂದ ಮತ್ತು ಪ್ರಾಧಿಕಾರಕ್ಕೆ ಖಚಿತವಾಗಿ ಮನವರಿಕೆಯಾಗಿದ್ದರಿಂದ ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಎಲ್ಲ ಕಾರಣಗಳಿಂದ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳವುದು ಉಚಿತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ. ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43(ಎ) ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ದಕ್ಷಿಣ ಉಪ ವಲಯ ನಂ-2, ಬೆಳಗಾಂವ ಇವರು ದಾಖಲು ಮಾಡಿದ ಗುನ್ಹೆ ನಂ. 3/2000-01 ದಿನಾಂಕ: 21.08.2000 ನೇದ್ದರಲ್ಲಿ ಜಪ್ತಾದ ಟ್ರ್ಯಾಕ್ಟರ್ ನಂ.ಎಂಹೆಚ್-09-ಯು-747 ಟ್ರಾಲಿ ನಂ. ಎಂಹೆಚ್-09-ಯು-748 ಇದನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ದಿನಾಂಕ: 17.07.2003 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ, ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ. ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ. 1 | - | ಶ್ರೀ ಮಾಣಿಕ ವಾಸುದೇವ ಶೆಟ್ಟಿ, ಶೆಟ್ಟಿಗಲ್ಲಿ, ಬೆಳಗಾಂವ | - ಪಂಚ |
| ಪ್ರಾ.ಸಾ. 2 | - | ಶ್ರೀ ಹೆಚ್. ಆರ್. ಚಿಕ್ಕಜಂಬಗಿ, ಅಬಕಾರಿ ಸಬ್ ಇನ್ಸ್‌ಪೆಕ್ಟರ್, ದಕ್ಷಿಣ ಉಪ ವಲಯ ನಂ-2, ಬೆಳಗಾಂವ | - ಫಿರ್ಯಾದಿ |

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | | |
|---|---|---|---|
| ನಿಶಾನೆ | ಪಿ-1 | - | ಪಂಚನಾಮೆಯ ಕಾರ್ಬನ್ ಪ್ರತಿ. |
| ನಿಶಾನೆ | ಪಿ-1ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-1(ಬಿ) | - | ಪಂಚನಾಮೆಯಲ್ಲಿಯ ಫಿರ್ಯಾದಿ ಸಹಿ. |
| ನಿಶಾನೆ | ಪಿ-2 | - | ಫಿರ್ಯಾದಿನ ದೃಢೀಕೃತ ಪ್ರತಿ. |
| ನಿಶಾನೆ | ಪಿ-2ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-3 | - | ಪ್ರಥಮ ವರ್ತಮಾನ ವರದಿಯ ದೃಢೀಕೃತ ಪ್ರತಿ. |
| ನಿಶಾನೆ | ಪಿ-3ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-4 | - | ವಾಹನ ಶೋಧನೆ ಮಾಡಿದ ಬಗ್ಗೆ ಕಾರಣಗಳನ್ನು ನ್ಯಾಯಾಲಯಕ್ಕೆ ಸಲ್ಲಿಸಿದ ವರದಿ. |
| ನಿಶಾನೆ | ಪಿ-4ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-5 | - | ಜಪ್ತಾದ ಮುದ್ದೆ ಮಾಲನ್ನು ತಾಬಾದಲ್ಲಿ ಇಟ್ಟುಕೊಳ್ಳಲು ಅಧಿಕೃತ ಅಧಿಕಾರಿಗಳಿಗೆ ಬರೆದ ಅನುಮತಿ ಪತ್ರದ ಕಾರ್ಬನ್ ಪ್ರತಿ. |
| ನಿಶಾನೆ | ಪಿ-5ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-6 | - | ರಾಸಾಯನಿಕ ಪರೀಕ್ಷೆ ಪ್ರಮಾಣ ಪತ್ರ. |
| ನಿಶಾನೆ | ಪಿ-6ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-7 | - | ಆರ್.ಟಿ.ಓ. ಯವರಿಗೆ ಬರೆದ ಕಛೇರಿ ಪ್ರತಿ. |
| ನಿಶಾನೆ | ಪಿ-7ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-8,9 | - | ಆರ್.ಟಿ.ಓ, ಕೊಲ್ಹಾಪೂರ ಇವರ ಪತ್ರ. |
| ನಿಶಾನೆ | ಪಿ-8ಎ, 9ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-10 | - | ಆರ್.ಟಿ.ಓ ಕೊಲ್ಹಾಪೂರ ಇವರ ಸ್ಪಷ್ಟೀಕರಣ ಪತ್ರ. |

**ಅನುಬಂಧ - 3**

**ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು:**

| | | | |
|---|---|---|---|
| 1. | ಮುದ್ದೆ ಮಾಲು-1 | - | ಜಪ್ತಾದ ಟ್ರೇಲರ್ ನಂ. ಎಂಹೆಚ್-09-ಯು-748. |
| 2. | ಮುದ್ದೆ ಮಾಲು-2 | - | ಜಪ್ತಾದ ಟ್ರ್ಯಾಕ್ಟರ್ ನಂ. ಎಂಹೆಚ್-09-ಯು-747 |

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

ಡಿ.ಡಬ್ಲ್ಯೂ- 1 - ಶ್ರೀ ಮಾರುತಿ ನಾಗೋಜಿ ಖಾಂಡೇಕರ, ಶಿನೋಳ್ಳಿ - ವಾಹನ ಮಾಲೀಕ

**ಅನುಬಂಧ - 5**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ

**ಪಿ. ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

ಪಿ.ಆರ್.1028

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಇವರ ನ್ಯಾಯಾಲಯದಲ್ಲಿ.**

**ಪ್ರಕರಣ ಸಂಖ್ಯೆ: ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ: 32/99-2000 ದಿನಾಂಕ:- 9ನೇ ಜೂನ್ 2000.**

**ಆದೇಶ ಸಂಖ್ಯೆ: ಇಎಕ್ಸ್‌ಇ: ಸಿಆರ್‌ಎಂ:ಡಿಟಿಸಿಆರ್:455:1999-2000 ದಿನಾಂಕ: 17ನೇ ಜುಲೈ 2003**

**ಉಪಸ್ಥಿತರು :** ಶ್ರೀ ಪಿ. ಎನ್. ಮುರಗೋಡ
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳವಾಂವ.

**ಫಿರ್ಯಾದಿ:**
ಶ್ರೀ ಸೂರ್ಯಕಾಂತ ಟಿ. ಜಿಂದೆ
ಅಬಕಾರಿ ಇನ್‌ಸ್ಪೆಕ್ಟರ್
ಇ.ಐ.ಬಿ. ಬೆಳಗಾಂವ

**ಆರೋಪಿತರು:**
1) ಗೌಸಸಾಬ್ ದಿವಾನಸಾಬ್. ತಾಳಿಕೋಟೆ,
ಸಾ: ಸಂಪಗಾಂವ, (ಹೊಸಪೇಟೆಗಲ್ಲಿ)
ತಾ: ಬೈಲಹೊಂಗಲ- ವಾಹನ ಚಾಲಕ
2) ಮೆಹಬೂಬಸಾಬ್. ಅದಮ್‌ಸಾಬ. ಹಿರೇಕರ,
ಸಾ:ಸಂಪಗಾಂವ ತಾ: ಬೈಲಹೊಂಗಲ-ವಾಹನ ಮಾಲೀಕ

**ಪ್ರಸ್ತಾವನೆ:**

ದಿನಾಂಕ: 9.6.2000 ರಂದು ಸಂಜೆ 4.30 ರ ಸಮಯಕ್ಕೆ ಈ ಪ್ರಕರಣದ ಫಿರ್ಯಾದಿಯಾದ ಅಬಕಾರಿ ಇನ್‌ಸ್ಪೆಕ್ಟರ್ ಇ.ಐ.ಬಿ. ಬೆಳಗಾಂವ ಇವರು ತಮ್ಮ ಸಿಬ್ಬಂದಿ ಮತ್ತು ಪಂಚರೊಂದಿಗೆ ಕೂಡಿಕೊಂಡು ರಾಷ್ಟ್ರೀಯ ಹೆದ್ದಾರಿ ನಂ.4 ಬದಿ ಇರುವ ಕೆ. ಕೆ. ಕೊಪ್ಪ ಕ್ರಾಸ್‌ನಲ್ಲಿ ರಸ್ತೆಗಾವಲು ನಿರ್ವಹಿಸುತ್ತಿದ್ದಾಗ ಸಂಜೆ 7-30 ರ ಸಮಯಕ್ಕೆ ಹುಬ್ಬಳ್ಳಿಯಿಂದ ಒಂದು ಗಿಳಿ ಹಸಿರು ಬಣ್ಣದ 407 ವಾಹನವು ಬಂದಿದ್ದನ್ನು ಪಂಚರ ಸಮಕ್ಷಮ ನಿಲ್ಲಿಸಿ ನೋಡಲಾಗಿ ವಾಹನದಲ್ಲಿ ಚಾಲಕನೊಬ್ಬನೆ ಇದ್ದು, ವಾಹನದ ನಂ. ಕೆಎ-24-2063 ಗೂಡ್ಸ್ ಟೆಂಪೊ ಇದ್ದು, ಅದನ್ನು ತಪಾಸಣೆ ಮಾಡಿ ನೋಡಲಾಗಿ 135 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್‌ದ 48 ಬಾಟ್ಲಿಗಳಂತೆ ಓರಿಜಿನಲ್ ಚ್ವಾಯಿಸ್ ಮದ್ಯ ತುಂಬಿದ ಬಾಟ್ಲಿಗಳು ಇದ್ದು, 10 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 375 ಎಂ.ಎಲ್‌ದ ಓರಿಜಿನಲ್ ಚ್ವಾಯಿಸ್ ವಿಸ್ಕಿ ಬಾಟ್ಲಿಗಳು ಇದ್ದವು. ಅವುಗಳನ್ನು ಸಾಗಾಟ ಮಾಡಲು ಲೈಸೆನ್ಸ್ ವ ಪರಿಮಿಟ್ ಇದೆಯೇ ಎಂದು ವಾಹನ ಚಾಲಕನನ್ನು ವಿಚಾರಿಸಲಾಗಿ ಆತನು ತನ್ನ ಹೆಸರು ಗೌಸಸಾಬ್ ದಿವಾನಸಾಬ್ ತಾಳಿಕೋಟೆ, ಸಾ:ಸಂಪಗಾಂವ, ಹೊಸಪೇಟೆಗಲ್ಲಿ ತಾಲ್ಲೂಕು:ಬೈಲಹೊಂಗಲ ಉದ್ಯೋಗ: ವಾಹನ ಚಾಲಕ ಅಂತಾ ಮತ್ತು ತನ್ನ ವಾಹನದಲ್ಲಿ ತಂದಿರುವ ರಟ್ಟಿನಪೆಟ್ಟಿಗೆಗಳಲ್ಲಿಯ ಮದ್ಯದ ಬಗ್ಗೆ ತನ್ನ ಹತ್ತಿರ ಯಾವುದೇ ತರಹದ ಕಾಗದಪತ್ರ ಇರುವುದಿಲ್ಲ ಅಂತಾ ಹೇಳಿದನು. ಆದ್ದರಿಂದ ಆತನು ಸರಕಾರಕ್ಕೆ ಕರಕೊಡದ ಮದ್ಯದ ಬಾಟ್ಲಿಗಳನ್ನು ಸದರಿ ವಾಹನದಲ್ಲಿ ಅಕ್ರಮ ಸಾಗಾಟ ಮಾಡುತ್ತಿದ್ದುದು ಖಚಿತವಾಗಿದ್ದರಿಂದ 180 ಎಂ.ಎಲ್‌ದ 10 ಬಾಟ್ಲಿಗಳು ಮತ್ತು 375 ಎಂ.ಎಲ್‌ದ 10 ಬಾಟ್ಲಿಗಳು ಹೀಗೆ ಒಟ್ಟು 20 ಮದ್ಯದ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಪ್ರತ್ಯೇಕ ತೆಗೆದು ಶೀಲು ಮಾಡಿ ತನ್ನ ಹಾಗೂ ಪಂಚರ ಸಹಿ ಚೀಟಿಗಳನ್ನು ಅಂಟಿಸಿದರು. ಆರೋಪಿಯನ್ನು ದಸ್ತಗಿರಿ ಮಾಡಿ ವಾಹನ ಮತ್ತು ಮದ್ಯದ ಬಾಟ್ಲಿಗಳನ್ನು ಪಂಚರ ಸಮಕ್ಷಮ ಜಪ್ತಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡಿದ್ದಾರೆ. ಈ ಬಗ್ಗೆ ಸ್ಥಳದಲ್ಲಿ ರಾತ್ರಿ 8 ರಿಂದ 9 ರ ವರೆಗೆ ಬ್ಯಾಟರಿ ಬೆಳಕಿನಲ್ಲಿ ಪಂಚನಾಮೆ ತಯಾರಿಸಿದ್ದಾರೆ. ನಂತರ ಆರೋಪಿ ಹಾಗೂ ಜಪ್ತಾದ ಮುದ್ದೆಮಾಲುಗಳೊಂದಿಗೆ ಅಬಕಾರಿ ಕಛೇರಿಗೆ ಬಂದು ಸರಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ವಾಹನದ ಚಾಲಕ ಮತ್ತು ಮಾಲೀಕರ ವಿರುದ್ಧ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11 14, 32, 38 ಎ ಪ್ರಕಾರ ಫಿರ್ಯಾದನ್ನು ಸಲ್ಲಿಸಿ, ಗುನ್ನೆ ನಂ. 32/99-2000 ದಿನಾಂಕ: 9.6.2000ನ್ನು ದಾಖಲಿಸಿರುತ್ತಾರೆ. ಮುದ್ದೆಮಾಲುಗಳ ಬಗ್ಗೆ ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿಯವರಿಗೆ ವರದಿ ಸಲ್ಲಿಸಿದ್ದಾರೆ.

ನಂತರ ದಿನಾಂಕ: 17.6.2000 ರಂದು ವಾಹನ ಮಾಲೀಕರು ಅರ್ಜಿ ಸಲ್ಲಿಸಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುವರು. ಈ ಕುರಿತು ದಿನಾಂಕ: 16.6.2000 ರಂದು ಆರೋಪಿ ನಂ. 1 ಇವರಿಗೆ ಕಾರಣ ಕೇಳಿ ನೋಟಿಸನ್ನು 43 ಬಿ ರೀತ್ಯ ನೀಡಲಾಗಿ ದಿನಾಂಕ: 27.6.2000 ರಂದು ವಕೀಲರಾದ ಬಿ. ಆರ್. ಕಾದ್ರೋಳ್ಳಿ ಇವರ ಮೂಲಕ ನೋಟಿಸಿಗೆ ಉತ್ತರ ನೀಡಿರುವರು.

ನಂತರ ದಿನಾಂಕ: 29.6.2000 ರಂದು ಸದರಿ ಮಧ್ಯಂತರ ವಶಕ್ಕೆ ಬಿಡುಗಡೆ ಕೋರಿದ ಅರ್ಜಿಯನ್ನು ಈ ಪ್ರಾಧಿಕಾರವು ತಿರಸ್ಕರಿಸಿರುವುದು. ನಂತರ ಮಾನ್ಯ ಮೂರನೆಯ ಅಧಿಕ ಸತ್ರ ನ್ಯಾಯಾಲಯ, ಬೆಳಗಾಂವ ಇವರ ಕ್ರಿಮಿನಲ್ ಅಪೀಲ್ ನಂ.36/2000 ದಿನಾಂಕ: 27.10.2000 ರಲ್ಲಿ ಈ ಪ್ರಾಧಿಕಾರದ ಆದೇಶವನ್ನು ತಳ್ಳಿಹಾಕಿ ವಾಹನವನ್ನು 1,20,000=00 ರೂ.ಗಳ ಇಂಡೆಮ್ನಿಟಿ ಬಾಂಡ್ ಹಾಗೂ ಒಂದು ಸ್ಯೂರುಟಿ ಪಡೆದು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ಆದೇಶಿಸಿರುವರು. ನಂತರ ದಿನಾಂಕ: 6.11.2000 ರಂದು ಮಾನ್ಯ ಸತ್ರ ನ್ಯಾಯಾಲಯದ ಆದೇಶದಂತೆ ವಾಹನವನ್ನು ಬಿಡುಗಡೆ ಮಾಡಲಾಯಿತು.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಪರವಾಗಿ ಫಿರ್ಯಾದಿ, ತನಿಖಾಧಿಕಾರಿ ಹಾಗೂ ಒಬ್ಬ ಪಂಚ ಮತ್ತು ವಾಹನ ಮಾಲೀಕರ ಸಾಕ್ಷಿ ಹೇಳಿಕೆ ಪಡೆಯಲಾಗಿದೆ ಹಾಗೂ 7 ದಾಖಲೆಗಳನ್ನು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ಒದಗಿಸಿರುವ ಸಾಕ್ಷ್ಯಾಧಾರದಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದರಿಂದ ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 9.6.2000 ರಂದು ವಾಹನ ಸಂ. ನಂ. ಕೆಎ-24-2063 (407) ಗೂಡ್ಸ್ ಟೆಂಪೊದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಟ ಮಾಡಲಾಗಿತ್ತೇ?
2. ಸದರಿ ವಾಹನದಲ್ಲಿ ಮದ್ಯದ ಸಾಗಾಟವನ್ನು ತಮ್ಮ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂದು ವಾಹನ ಮಾಲೀಕರು ಸಿದ್ದಪಡಿಸಿದ್ದಾರೆಯೇ?
3. ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೆ?

ಈ ಮೇಲೆ ತಿಳಿಸಿದ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯಾಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೆಯ ಅಂಶವನ್ನು ಗುಣಾತ್ಮಕವಾಗಿ, ಎರಡನೆಯ ಅಂಶವನ್ನು ನಕಾರಾತ್ಮಕವಾಗಿ ಹಾಗೂ ಮೂರನೆಯ ಅಂಶವನ್ನು ಕೊನೆಯ ಆದೇಶದಂತೆ.

ಪ್ರಾ.ಸಾ-1 ಶ್ರೀ ಸೂರ್ಯಕಾಂತ. ತುಕಾರಾಮ. ಜಿಂದೆ, ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ, ಪಿರ್ಯಾದಿ ಇವರು ದಿನಾಂಕ: 31.1.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುವರು. ದಿನಾಂಕ: 9.6.2000 ರಂದು ಸಾಯಂಕಾಲ 4.30 ಗಂಟೆಯ ಸುಮಾರಿಗೆ ಮೇಲಾಧಿಕಾರಿಗಳ ಆದೇಶದಂತೆ ರಾಷ್ಟ್ರೀಯ ಹೆದ್ದಾರಿ ನಂ4 ರ ಮೇಲೆ ಅಬಕಾರಿ ಗುನ್ಹೆಗಳ ಬಗ್ಗೆ ವಾಹನ ತಪಾಸಣೆ ಮಾಡಲು ಪಂಚರು ಹಾಗೂ ಸಿಬ್ಬಂದಿಯೊಂದಿಗೆ ಹೋಗಿದ್ದಾಗ ಸಾಯಂಕಾಲ 7.30ರ ಸುಮಾರಿಗೆ ಕೆ. ಕೆ. ಕೊಪ್ಪ ಕ್ರಾಸ್ ಹತ್ತಿರ ಹುಬ್ಬಳ್ಳಿ ಕಡೆಯಿಂದ 407 ವಾಹನ ಗಿಳಿ ಹಸಿರು ಬಣ್ಣದ್ದು ಬರುತ್ತಿದ್ದುದ್ದನ್ನು ನಿಲ್ಲಿಸಿ ತಪಾಸಣೆ ಮಾಡಿದ್ದಾರೆ. ಅದರಲ್ಲಿ ರಟ್ಟಿನಪೆಟ್ಟಿಗೆಗಳಿದ್ದು. ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಅಕ್ರಮ ಸಾಗಾಟ ಮಾಡುತ್ತಿದ್ದುದು ಖಚಿತವಾಗಿದ್ದರಿಂದ ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿದ್ದಾರೆ. ಪಂಚನಾಮೆಯ ಮೂಲ ಪ್ರತಿ ನಿಪಿ-1 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-1ಎ ಅಂತಾ ಗುರುತಿಸಲಾಗಿದೆ. ಅದರ ದೃಢೀಕೃತ ಕಾರ್ಬನ್ ಪ್ರತಿಯನ್ನು ನಿಪಿ-1 (1) ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-1 (1) ಎ ಅಂತಾ ಗುರುತಿಸಲಾಗಿದೆ. ನಂತರ ಆರೋಪಿ ಹಾಗೂ ಜಪ್ತಾದ ಮುದ್ದೆಮಾಲುಗಳೊಂದಿಗೆ ಅಬಕಾರಿ ಕಛೇರಿಗೆ ಬಂದು ಸರಕಾರದ ಪರವಾಗಿ ಅವರೇ ಫಿರ್ಯಾದಿಯಾಗಿ ಗುನ್ಹೆ ನಂ. 32/99-2000 ನೇದ್ದರಲ್ಲಿ ಆರೋಪಿತರ ವಿರುದ್ಧ ಫಿರ್ಯಾದನ್ನು ದಾಖಲು ಮಾಡಿ ಪ್ರಥಮ ವರ್ತಮಾನ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದಾರೆ. ಫಿರ್ಯಾದಿನ ದೃಢೀಕೃತ ಕಾರ್ಬನ್ ಪ್ರತಿ ನಿಪಿ-2 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-2ಎ ಅಂತಾ ಗುರುತಿಸಲಾಗಿದೆ. ಪ್ರಥಮ ವರ್ತಮಾನ ವರದಿಯ ದೃಢೀಕೃತ ಕಾರ್ಬನ್ ಪ್ರತಿ ನಿಪಿ-3 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-3ಎ ಅಂತಾ ಗುರುತಿಸಲಾಗಿದೆ. ಆರೋಪಿಯನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದಾರೆ. ವಾಹನವನ್ನು ಶೋಧಿಸುವ ಮೊದಲು ನ್ಯಾಯಾಲಯದ ಅನುಮತಿ ಪಡೆಯದೇ ಇದ್ದ ಬಗ್ಗೆ ಕಾರಣಗಳನ್ನು ನಮೂದಿಸಿ ನ್ಯಾಯಾಲಯಕ್ಕೆ ವರದಿ ಸಲ್ಲಿಸಿದ್ದಾರೆ. ಅದರ ಕಾರ್ಬನ್ ದೃಢೀಕೃತ ಪ್ರತಿ ನಿಪಿ-4 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-4ಎ ಅಂತಾ ಗುರುತಿಸಲಾಯಿತು. ನ್ಯಾಯಾಲಯದ ಅನುಮತಿ ಪಡೆಯುವುದರೊಳಗಾಗಿ ಆರೋಪಿ ಮುದ್ದೆಮಾಲಿನೊಂದಿಗೆ ತಪ್ಪಿಸಿಕೊಂಡು ಹೋಗುವ ಸಾಧ್ಯತೆ ಇರುವುದರಿಂದ ಅನುಮತಿ ಪಡೆಯಲಾಗಿಲ್ಲ ಎಂದು ತಿಳಿಸಿದ್ದಾರೆ. ಜಪ್ತಾದ ಮಾಲನ್ನು ತನಿಖೆ ಮುಗಿಯುವವರೆಗೆ ಅವರ ವಶದಲ್ಲಿ ಇಟ್ಟು ಕೊಳ್ಳಲು ಅಧಿಕೃತ ಅಧಿಕಾರಿಯವರಿಗೆ ವಿನಂತಿ ಅರ್ಜಿ ಸಲ್ಲಿಸಿ ಅನುಮತಿ ಪಡೆದಿದ್ದಾರೆ. ಅದು ನಿಪಿ-5 ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-5ಎ ಅಂತ ಗುರುತಿಸಲಾಗಿದೆ. ಜಪ್ತಾದ ಮದ್ಯ ಹಾಗೂ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅಧಿಕಾರಿಯವರಿಗೆ ವಿನಂತಿಸಿಕೊಂಡಿದ್ದಾರೆ. ಜಪ್ತಾದ ವಾಹನವು ಇಲಾಖೆಯ ವಶದಲ್ಲಿದ್ದು ನಂತರ ಮಾನ್ಯ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರ ಆದೇಶದಂತೆ ವಾಹನದ ಮಾಲೀಕರಿಗೆ ಮಧ್ಯಂತರ ವಶಕ್ಕೆ ಬಿಟ್ಟುಕೊಡಲು ಆದೇಶವಾದಂತೆ ದಿನಾಂಕ: 16.11.2000 ರಂದು ಬಿಟ್ಟುಕೊಟ್ಟಿರುತ್ತಾರೆ. ಅದನ್ನು ನೋಡಿ ಗುರುತಿಸುತ್ತಾರೆ.

ಮುಖ್ಯ ವಿಚಾರಣೆ ಎ.ಡಿ.ಪಿಯವರಿಂದ: ಅವರು ವಾಹನವನ್ನು ನೋಡಿದರೆ ಗುರುತಿಸುತ್ತಾರೆ. (ವಾಹನವನ್ನು ಮಧ್ಯಂತರ ವಶಕ್ಕೆ ಕೊಡಲಾಗಿದ್ದು ಅದನ್ನು ಹಾಜರುಪಡಿಸಿರುವುದಿಲ್ಲ) ವಾಹನ ಮಾಲೀಕರು ಮತ್ತು ಅವರ ವಕೀಲರು ವಾಹನದ ಗುರುತಿನ ಬಗ್ಗೆ ತಮ್ಮ ತಕರಾರು ಇಲ್ಲ ಅಂತಾ ಹೇಳಿರುತ್ತಾರೆ. ದಿನಾಂಕ: 17.6.2000 ರಂದು ಪ್ರಕರಣದ ಕಡತವನ್ನು ಮತ್ತು ಜಪ್ತಾದ ಮದ್ಯ ಮತ್ತು ಮಾದರಿ ಬಾಟ್ಲಿಗಳನ್ನು ಶ್ರೀ ಬಿ. ಎಂ. ಪೋಟೆ, ಅಬಕಾರಿ ಇನ್ಸ್‌ಪೆಕ್ಟರ್ ಇವರಿಗೆ ಮುಂದಿನ ತನಿಖೆಗಾಗಿ ವಹಿಸಿಕೊಟ್ಟಿದ್ದಾರೆ. ಸದರಿಯವರು ಮದ್ಯದ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ಮದ್ಯದ ಬಾಟ್ಲಿಗಳನ್ನು ಕಳುಹಿಸಿ ಅವರಿಂದ ಪ್ರಮಾಣ ಪತ್ರವನ್ನು ಪಡೆದುಕೊಂಡಿದ್ದಾರೆ. ಅದನ್ನು ನಿಪಿ (6) ಎಂದು ಗುರುತಿಸಿದೆ. ಪ್ರಮಾಣ ಪತ್ರದ ದೃಢೀಕೃತ ಫೋಟೋ ಪ್ರತಿ ನಿಪಿ-6 (1) ಮತ್ತು ಅದರ ಮೇಲಿನ ಅವರ ಸಹಿಯನ್ನು ನಿಪಿ-6 (1) ಎ ಅಂತಾ ಗುರುತಿಸಲಾಗಿದೆ. ಮಾದರಿ ಮದ್ಯದ ಬಾಟ್ಲಿಗಳನ್ನು ನೋಡಿ ಗುರುತಿಸಿದ್ದಾರೆ. ಅವುಗಳನ್ನು ಎಮ್‌ಓ-1

ಅಂತಾ ಗುರುತಿಸಲಾಗಿದೆ. ಜಪ್ತಾದ ವಾಹನವನ್ನು ಮಾನ್ಯ ಸೆಷನ್ಸ್ ನ್ಯಾಯಾಲಯದ ಆದೇಶದ ಪ್ರಕಾರ ಅದರ ನೊಂದಾಯಿತ ಮಾಲೀಕರಾದ ಶ್ರೀ ಮೊಹಬೂಬ್‌ಸಾಬ್ ಅದಮ್‌ಸಾಬ ಹೀರೇಕರ ಇವರಿಗೆ ಮಧ್ಯಂತರ ವಶಕ್ಕೆ ಬಿಟ್ಟುಕೊಟ್ಟಿರುತ್ತಾರೆ. ಸದರಿಯವರು ಈ ದಿನ ಪ್ರಾಧಿಕಾರದ ಮುಂದೆ ಹಾಜರಿದ್ದು ಅವರನ್ನು ಗುರುತಿಸಿದ್ದಾರೆ. ವಾಹನದ ಮಾಲೀಕರು ಮಾನ್ಯ ನ್ಯಾಯಾಲಯದಿಂದ ಜಾಮೀನು ಪಡೆದುಕೊಂಡಿದ್ದರಿಂದ ಅವರನ್ನು ದಸ್ತಗಿರಿ ಮಾಡಿರುವುದಿಲ್ಲ. ವಾಹನ ಮಾಲೀಕರ ಒಪ್ಪಿಗೆ ಹಾಗೂ ತಿಳುವಳಿಕೆಯಿಂದ ಸದರಿ ಅಪರಾಧವು ನಡೆದಿರುತ್ತದೆ. ಪ್ರಕರಣದ ಮುಂದಿನ ತನಿಖೆಯನ್ನು ಶ್ರೀ ಮಾಯನ್ನವರ, ಅ.ಸ.ಇ. ಇವರು ವಹಿಸಿಕೊಂಡಿರುತ್ತಾರೆ. ನಂತರ ವಾಹನ ಮಾಲೀಕರ ಪರ ವಕೀಲರು ಪಾಟೀ ಸವಾಲು ಮಾಡಿದ್ದಾರೆ. ತಮ್ಮ ಹೇಳಿಕೆಯಲ್ಲಿ ಅವರು ವರ್ತಮಾನ ಬಂದಾಗ ಕಛೇರಿಯಲ್ಲಿದ್ದರು. ಆಗ ಸಾಯಂಕಾಲ 5 ಗಂಟೆಯಾಗಿರಬಹುದು. ಆ ಬಗ್ಗೆ ಅವರು ದಿನಚರಿ ಪುಸ್ತಕದಲ್ಲಿ ನಮೂದಿಸಿದ್ದಾರೆ. ಮಾನ್ಯ ನ್ಯಾಯಾಲಯಕ್ಕೆ ವಾಹನವನ್ನು ಶೋಧಿಸುವ ಬಗ್ಗೆ ಬರೆದುಕೊಂಡಿದ್ದಾರೆ. ಆದರೆ ವಾಹನವನ್ನು ಶೋಧಿಸುವ ಮೊದಲು ನ್ಯಾಯಾಲಯಕ್ಕೆ ಆ ಬಗ್ಗೆ ವರದಿಯನ್ನು ತಲುಪಿಸಿಲ್ಲ ಅಂದರೆ ಸರಿ. ಆ ಬಗ್ಗೆ ಅಂದರೆ ವಾಹನವನ್ನು ಶೋಧಿಸುವ ಮೊದಲು ನ್ಯಾಯಾಲಯದಿಂದ ಆದೇಶ ಪಡೆದುಕೊಳ್ಳುವುದರೊಳಗಾಗಿ ಅಪರಾಧಿಗಳು ವಾಹನದೊಂದಿಗೆ ತಪ್ಪಿಸಿಕೊಂಡು ಹೋಗುವ ಸಂಭವ ಇದ್ದುದರಿಂದ ನ್ಯಾಯಾಲಯದ ಆದೇಶ ಪಡೆಯಲು ಸಾಧ್ಯವಾಗಿಲ್ಲ. ಸದರಿ ಕಾರಣಗಳನ್ನು ಪಂಚನಾಮೆ ಅಥವಾ ಫಿರ್ಯಾದಿನಲ್ಲಿ ನಮೂದಿಸಿದಲ್ಲ ಅಂದರೆ ಸರಿ. ಪಂಚರನ್ನು ಕರೆತರಲು ಅವರೇ ಹೇಳಿ ಕಳಿಸಿದ್ದರು. ಅವರು ಕಛೇರಿ ಬಿಟ್ಟಾಗ 5-15 ಆಗಿರಬಹುದು. ಅವರು ತಮ್ಮ ಜೀಪಿನಲ್ಲಿ 6 ಜನ ಹೋಗಿದ್ದರು. ಪಂಚರನ್ನು ಅವರೊಂದಿಗೆ ಕರೆದುಕೊಂಡು ಹೋಗಿದ್ದರು. ಅವರು ವಾಹನವನ್ನು ಹಿಡಿದ ಅವಧಿಯಲ್ಲಿ ಕರ್ನಾಟಕದಲ್ಲಿ ವಿಧಾನ ಸಭೆ ಚುನಾವಣೆ ನಡೆದಿತ್ತು ಅಂದರೆ ಸರಿ. ಅವರ ಕಛೇರಿಯಿಂದ ವಾಹನ ಹಿಡಿದ ಜಾಗ ಸುಮಾರು 8-10 ಕೀ.ಮಿ. ದೂರವಾಗುತ್ತದೆ. ಅವರು ಆ ದಿನ ಸುಮಾರು ಸಾಯಂಕಾಲ 8.30 ರ ಸುಮಾರಿಗೆ ಸದರಿ ಸ್ಥಳಕ್ಕೆ ಹೋಗಿದ್ದಾರೆ. ಅವರು ದಾರಿಯಲ್ಲಿ ವಾಹನ ತಪಾಸಣೆ ಮಾಡುತ್ತಾ ಹೋಗಿದ್ದರಿಂದ ವೇಳೆ ಹಿಡಿದಿರುತ್ತದೆ. ಅವರು ಆ ದಿನ ತಪಾಸಣೆ ಮಾಡಿದ ಬೇರೆ ವಾಹನಗಳ ನಂಬರುಗಳನ್ನು ಈಗ ಹೇಳಲು ಬರುವುದಿಲ್ಲ. ಅವುಗಳ ನಂಬರುಗಳನ್ನು ಫಿರ್ಯಾದು ಪಂಚನಾಮೆಗಳಲ್ಲಿ ನಮೂದು ಮಾಡಿಲ್ಲ ಅಂದರೆ ಸರಿಯಲ್ಲ. ಅವರು ಗುನ್ನೆ ಜಾಗದಲ್ಲಿ ಜಪ್ತಾದ ವಾಹನ ತಪಾಸಣೆ ಮಾಡುವುದಕ್ಕಿಂತ ಮೊದಲು ಇನ್ನೂ ಕೆಲವು ವಾಹನಗಳ ಬಗ್ಗೆ ವಿಚಾರಣೆ ಮಾಡಿದ್ದೇವೆ. ಅವರು ಆ ದಿನ ಒಟ್ಟು 10-12 ವಾಹನಗಳ ತಪಾಸಣೆ ಮಾಡಿದ್ದಾರೆ. ಆದರೆ ಈ ಬಗ್ಗೆ ಪಂಚನಾಮೆ ಮತ್ತು ಫಿರ್ಯಾದಿಯಲ್ಲಿ ನಮೂದಿಸಿಲ್ಲ. ಅವರು ವಾಹನವನ್ನು ಹಿಡಿದ ಜಾಗದ ಹತ್ತಿರ ಜನವಸತಿ ಇರುತ್ತದೆ. ಅವರು ಸದರಿ ಜಾಗೆಯಿಂದ ಪಂಚರಾಗಲೀ ಯಾರನ್ನೂ ಕರೆದಿಲ್ಲ. ಮತ್ತು ಅಲ್ಲಿಯ ಜನರ ಹೇಳಿಕೆ ಪಡೆದುಕೊಂಡಿಲ್ಲ. ಅವರನ್ನು ನೋಡಿ ಜಪ್ತಾದ ವಾಹನದ ಚಾಲಕನು ಓಡಿ ಹೋಗಲು ಪ್ರಯತ್ನ ಮಾಡಿರುವುದಿಲ್ಲ. ಗುನ್ನೆ ಜಾಗೆ ಚಕ್ಕುಬಂದಿ ಬರೆದಿಲ್ಲ. ವಾಹನವನ್ನು ಹಿಡಿದ ಜಾಗೆಯಲ್ಲಿ ಕತ್ತಲು ಇತ್ತು. ಅವರು ಪಂಚನಾಮೆಯನ್ನು ರಸ್ತೆಯ ಪಕ್ಕದಲ್ಲಿ ಟ್ಯೂಬ್‌ಲೈಟ್ ಬೆಳಕಿನಲ್ಲಿ ಬರೆದಿರುತ್ತಾರೆ. ಅವರ ಹತ್ತಿರ ಟಾರ್ಚ್‌ಗಳು ಸಹ ಇದ್ದವು. ಪಂಚನಾಮೆಯನ್ನು ಅವರ ಜೊತೆಯಲ್ಲಿದ್ದ ಸಿಬ್ಬಂದಿ ಬರೆದಿರುತ್ತಾರೆ. ಆದರೆ ಅದಕ್ಕೆ ಅವರು ದಸ್ತೂರ ಮಾಡಿಲ್ಲ. ಅವರು ಪಂಚನಾಮೆಯನ್ನು ಅವರ ಕಚೇರಿಯಲ್ಲಿ ಕುಳಿತು ತಯಾರು ಮಾಡಿದ್ದಾರೆ ಎಂದರೆ ಸರಿಯಲ್ಲ. ಪಂಚನಾಮೆಯಲ್ಲಿ ಮತ್ತು ಎಫ್.ಐ.ಆರ್. ದಲ್ಲಿ ಜಪ್ತಾದ ಮದ್ಯದ ತಯಾರಿಕರ ಹೆಸರು ನಮೂದಿಸಿಲ್ಲ. ಎಫ್.ಐ.ಆರ್‌ನ್ನು ಅವರ ಸಿಬ್ಬಂದಿ ಬರೆದಿರುತ್ತಾರೆ. ಫಿರ್ಯಾದನ್ನು ಸಹ ಅವರು ಹೇಳಿ ಬರೆಸಿದ್ದಾರೆ. ಅವುಗಳ ದಸ್ತೂರ ಪಡೆದಿಲ್ಲ. ಫಿರ್ಯಾದಿ ಬರೆದವರ ಹೇಳಿಕೆ ಪಡೆದಿಲ್ಲ ಅವರ ಜೀಪ್ ಚಾಲಕನ ಹೇಳಿಕೆ ಪಡೆದಿಲ್ಲ. ಅವರು ಆ ದಿನ ಗುನ್ನೆ ಜಾಗೆಗೆ ಹೋಗಿದ್ದಾಗಿ ತಿಳಿಸಿರುತ್ತಾರೆ ಮತ್ತು ಜಪ್ತಾದ ವಾಹನವನ್ನು ಮದ್ಯದ ಸಮೇತ ಹಿಡಿದಿರುತ್ತಾರೆ. ಚುನಾವಣೆಯ ಸಮಯ ಇದ್ದುದರಿಂದ ಅಂಕಿ ಸಂಖ್ಯೆಗಾಗಿ ಸುಳ್ಳು ಕೇಸು ಹಾಕಿದ್ದಾರೆ ಎಂದರೆ ಸರಿಯಲ್ಲ. ವಾರಸುದಾರರಿಲ್ಲದ ರೂ.2,21,300 ಮೌಲ್ಯದ ಮದ್ಯವನ್ನು ಉಪಯೋಗಿಸಿ ಸುಳ್ಳು ಕೇಸು ಹಾಕಿದ್ದಾರೆ ಎಂದರೆ ಸರಿಯಲ್ಲ. ಜಪ್ತಾದ ಮದ್ಯದ ಮಾಲೀಕರು ಯಾರು ಅಂತಾ ಅವರ ತನಿಖೆಯಲ್ಲಿ ಗೊತ್ತಾಗಿರುವುದಿಲ್ಲ. ಮತ್ತು ಅದನ್ನು ಕೇಳಿಕೊಂಡು ಯಾರು ಮುಂದೆ ಬಂದಿರುವುದಿಲ್ಲ. ವಾಹನ ಮಾಲೀಕರು ಯಾವುದೇ ತಪ್ಪು ಮಾಡದಿದ್ದರೂ ಅವರು ಅವರ ಮೇಲಾಧಿಕಾರಿಗಳ ಮಾತು ಕೇಳಿ ಸುಳ್ಳು ಕೇಸು ಹಾಕಿದ್ದಾರೆ ಎಂದರೆ ಸರಿಯಲ್ಲ. ವಾಹನ ಮಾಲೀಕರ ಪಾಟೀ ಸವಾಲಿನಿಂದ ವಾಹನ ಮಾಲೀಕರಿಗೆ ಯಾವುದೇ ಪ್ರಯೋಜನವಾಗಿರುವುದಿಲ್ಲ.

ಶ್ರೀ ಮಾಣಿಕ ವಾಸುದೇವ ಶೆಟ್ಟಿ ಸಾ: ಶೆಟ್ಟಿಗಲ್ಲಿ, ಬೆಳಗಾಂವ ಇವರು ಈ ಪ್ರಾಧಿಕಾರದ ಮುಂದೆ ಪಂಚಸಾಕ್ಷಿದಾರರಾಗಿ ದಿನಾಂಕ: 31.1.2002 ರಂದು ಪ್ರಾ.ಸಾ 2 ಹಾಜರಾಗಿ ಹೇಳಿಕೆ ನೀಡಿರುತ್ತಾನೆ. ದಿನಾಂಕ: 9.6.2000 ರಂದು ಇವರನ್ನು ಹಾಗೂ ರಾಮಚಂದ್ರ ಜಾಧವ ಈತನನ್ನು ಫಿರ್ಯಾದಿ ಅಬಕಾರಿ ಗುನ್ನೆಯಲ್ಲಿ ಪಂಚರೆಂದು ತಮ್ಮ ಕಛೇರಿಗೆ ಕರೆಯಿಸಿ ನಂತರ ರಾಷ್ಟ್ರೀಯ ಹೆದ್ದಾರಿ ನಂ.4 ಮೇಲೆ ಕೆ.ಕೆ.ಕೊಪ್ಪ ಕ್ರಾಸ್ ಹತ್ತಿರ ಕರೆದುಕೊಂಡು ಹೋಗಿದ್ದರು. ಸಾಯಂಕಾಲ 7.30 ರ ಸುಮಾರಿಗೆ ಹುಬ್ಬಳ್ಳಿ ಕಡೆಯಿಂದ ಒಂದು ಗೂಡ್ಸ್ ಟೆಂಪೊ ಬಂದಿದನ್ನು ನಿಲ್ಲಿಸಿ ಶೋಧನೆ ಮಾಡಿದರು. ವಾಹನದ ನಂ.ಕೆಎ-24-2063 ಇದ್ದು ಅದರಲ್ಲಿ ಚಾಲಕನೊಬ್ಬನೇ ಇದ್ದು ಆತನ ಹೆಸರು ಗೌಸಸಾಬ್ ದೀವಾನ ಸಾಬ್ ತಾಳಿಕೋಟೆ ಅಂತಾ ಹೇಳಿದನು. ವಾಹನದಲ್ಲಿ ಮದ್ಯದ ಬಾಟ್ಲಿಗಳಿದ್ದ ರಟ್ಟಿನ ಪೆಟ್ಟಿಗೆಗಳಿದ್ದು ಅವುಗಳನ್ನು ಸಾಗಾಟ ಮಾಡಲು ಆತನ ಹತ್ತಿರ ಸರಕಾರದ ಅನುಮತಿ ಪತ್ರ ಇರಲಿಲ್ಲ. ಆದ್ದರಿಂದ ಫಿರ್ಯಾದಿ ಮದ್ಯದ ಬಾಟ್ಲಿಗಳನ್ನು ಮತ್ತು ವಾಹನವನ್ನು ಜಪ್ತಿಮಾಡಿ ಆರೋಪಿಯನ್ನು ದಸ್ತಗಿರಿ ಮಾಡಿದ್ದಾರೆ. ವಾಹನದಲ್ಲಿ 135 ರಟ್ಟಿನ ಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 180 ಎಂ.ಎಲ್‌ದ ಓರಿಜಿನಲ್ ಚ್ವಾಯಿಸ್ ವಿಸ್ಕಿಯ 48 ಬಾಟ್ಲಿಗಳಂತೆ ಒಟ್ಟು 6480 ಬಾಟ್ಲಿಗಳು ಇದ್ದವು. ಮತ್ತು 10 ರಟ್ಟಿನಪೆಟ್ಟಿಗೆಗಳಲ್ಲಿ ಪ್ರತಿಯೊಂದರಲ್ಲಿ 375 ಎಂ.ಎಲ್‌ದ 24 ಬಾಟ್ಲಿಗಳಂತೆ ಒಟ್ಟು 240 ಮದ್ಯದ ಬಾಟ್ಲಿಗಳು ಇದ್ದವು. ಅವುಗಳಿಂದ 180 ಹಾಗೂ 375 ಎಂ.ಎಲ್‌ದ 10 ರಂತೆ ಒಟ್ಟು 20 ಮದ್ಯದ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಸೀಲು ಮಾಡಿ ಅವರ ಮತ್ತು ಫಿರ್ಯಾದಿಯವರ ಸಹಿ ಚೀಟಿಗಳನ್ನು ಅಂಟಿಸಿದ್ದಾರೆ ಸ್ಥಳದಲ್ಲಿ ಪಂಚನಾಮೆ ತಯಾರಿಸಿ ಅವರ ಸಹಿ ಪಡೆದಿರುತ್ತಾರೆ. ಈಗ ನಿಪಿ-1 ಮತ್ತು ನಿಪಿ-1(1) ನೋಡಿದೆ. ಅವುಗಳಲ್ಲಿ ಅವರ ಸಹಿಗಳು ನಿಪಿ-1 (1ಬ) ಅಂತಾ ಗುರುತಿಸಲಾಯಿತು. ವಾಹನ ನೋಡಿದರೆ ಗುರುತಿಸುತ್ತಾರೆ (ವಾಹನ ಹಾಜರುಪಡಿಸಿಲ್ಲ) ಅವರಿಗೆ ಕನ್ನಡ ಓದಲಿಕ್ಕೆ ಬರುತ್ತದೆ. ಬರೆಯಲಿಕ್ಕೆ ಬರುವುದಿಲ್ಲ. ಅವರನ್ನು ಪಂಚ ಅಂತಾ ಕರೆಯಲು ಎಕ್ಸೈಜ್ ಗಾರ್ಡ್ ಬಂದಿದ್ದರು

ಅಬಕಾರಿ ಕಛೇರಿ ಎಷ್ಟು ಸಮಯಕ್ಕೆ ಬಿಟ್ಟಿದ್ದಾರೆ ಎಂಬುದು ಅವರಿಗೆ ಈಗ ಹೇಳಲು ಬರುವುದಿಲ್ಲ. ಅವರು 7-8 ಜನರು ಅಬಕಾರಿ ರೇಡಿಗೆ ಹೋಗಿದ್ದರು. ನಾವು ಯಾವ ಸರಕಾರಿ ಜೀಪ್‌ನಲ್ಲಿ ಹೋಗಿದ್ದೆವು ಎಂಬುದನ್ನು ಹೇಳಲು ಬರುವುದಿಲ್ಲ. ಈ ಗುನ್ನೆಕ್ಕಿಂತ ಮುಂಚೆ ಅವರು ಯಾವುದೇ ವಾಹನ ತಪಾಸಣೆ ಮಾಡಿಲ್ಲ. ಗುನ್ನೆ ಸ್ಥಳದ ಚಕ್ಕುಬಂದಿ ಅವರಿಗೆ ಹೇಳಲು ಬರುವುದಿಲ್ಲ. ಗಾಡಿ ನಂಬರ್ ಮತ್ತು ಈ ಗುನ್ನೆಯಲ್ಲಿ ಜಪ್ತಾದ ಮದ್ಯದ ವಿವರಣೆಗಳನ್ನು ಹೇಳಲು ಬರುವುದಿಲ್ಲ. ಅನ್ನುವುದು ಸರಿಯಲ್ಲ. ಅವರು ಈ ಹಿಂದೆ ಅಬಕಾರಿ ಗುನ್ನೆಗಳಲ್ಲಿ ಪಂಚನಾಗಿದ್ದಾನೆ ಅಂತಾ ಹೇಳುವುದು ಸಮಂಜಸವಾಗಿರುವುದಿಲ್ಲ. ಅವರು ಈ ಗುನ್ನೆಯಲ್ಲಿ ಪಂಚಾ ಅಂತಾ ಕೆ.ಕೆ. ಕೊಪ್ಪ ಕ್ರಾಸ್ ಹತ್ತಿರ ಹೋಗಿಲ್ಲ. ಮತ್ತು ಗುನ್ನೆ ಸ್ಥಳದಲ್ಲಿ ಪಂಚನಾಮೆ ಮಾಡಿಲ್ಲ ಅನ್ನುವುದು ಸರಿಯಲ್ಲ. ಅಲ್ಲದೇ ಈ ಗುನ್ನೆಯಲ್ಲಿ ಜಪ್ತಾದ ಮದ್ಯ ವಾಹನ ಜಪ್ತಿ ಮಾಡಿಲ್ಲ ಅನ್ನುವುದು ಸರಿಯಲ್ಲ. ಅಲ್ಲದೇ ಈ ಗುನ್ನೆಯ ಪಂಚನಾಮೆಯನ್ನು ಕಛೇರಿಯಲ್ಲಿ ಕುಳಿತು ತಯಾರಿಸಿರುವರು ಅನ್ನುವುದು ಸರಿಯಲ್ಲ. ಅಲ್ಲದೇ ಈ ಗುನ್ನೆಯಲ್ಲಿ ಇನ್ನೊಬ್ಬ ಪಂಚನು ಸಹ ಕಛೇರಿಯಲ್ಲಿ ಬಂದು ಸಹಿ ಮಾಡಿರುತ್ತಾರೆ. ಅಂದರೆ ಸರಿಯಲ್ಲ. ಫಿರ್ಯಾದಿ ಮಾತು ಕೇಳಿ ಸುಳ್ಳು ಸಾಕ್ಷಿ ಹೇಳುತ್ತೇನೆ. ಅಂದರೆ ಸರಿಯಲ್ಲ. ಸದರಿ ವಾಹನದಲ್ಲಿ ಮದ್ಯ ಸಾಗಾಟ ಆಗಿಲ್ಲ ಅನ್ನುವುದು ಸರಿಯಲ್ಲ ಎಂದು ತಿಳಿಸಿರುತ್ತಾರೆ. ಈ ವಿಚಾರಣೆಯಿಂದ ವಾಹನ ಪರ ವಕೀಲರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡು ಬರುವುದಿಲ್ಲ.

ಶ್ರೀ ಭೀಮಾ ಮಾರುತಿ ಪೋಟೆ, ಅಬಕಾರಿ ಇನ್ಸ್‌ಪೆಕ್ಟರ್, ಬೈಲಹೊಂಗಲ ವಲಯ ಇವರು ದಿನಾಂಕ: 20.6.2002 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಹೇಳಿಕೆಯನ್ನು ಪ್ರಾ.ಸಾ 3 ಆಗಿ ನೀಡಿರುತ್ತಾರೆ. ಇವರು ಸೆಪ್ಟೆಂಬರ್ 1999 ರಿಂದ ಫೆಬ್ರವರಿ 2001 ರ ವರೆಗೆ ಅಬಕಾರಿ ಸಬ್ ಇನ್ಸ್‌ಪೆಕ್ಟರ್ ಅಂತಾ ಬೆಳಗಾಂವ ದಕ್ಷಿಣ ಉಪ ವಲಯ ನಂ.1 ದಲ್ಲಿ ಕೆಲಸ ನಿರ್ವಹಿಸುತ್ತಿದ್ದರು. ಸೂರ್ಯಕಾಂತ ತುಕಾರಾಮ ಜಿಂದೆ ಇವರಿಂದ ದಿನಾಂಕ:18.6.2000 ರಂದು ಈ ಕೇಸಿನ ಕಡತಗಳು ಮತ್ತು ಮುದ್ದೆಮಾಲನ್ನು ವಹಿಸಿಕೊಂಡಿದ್ದಾರೆ. ವಾಹನವನ್ನು ಪಡೆದಿರುವುದಿಲ್ಲ. ದಿನಾಂಕ: 19.6.2000 ರಂದು ಮಾದರಿ ಬಾಟ್ಲಿಗಳನ್ನು ರಾಸಾಯನಿಕ ಪರೀಕ್ಷೆಗೋಸ್ಕರ ಅವರ ಅಬಕಾರಿ ರಕ್ಷಕರಿಂದ ರಾಸಾಯನಿಕ ಪರೀಕ್ಷೆಗಾಗಿ ಪ್ರಯೋಗಾಲಯ, ಬೆಂಗಳೂರಿಗೆ ಕಳಿಸಿರುತ್ತಾರೆ. ಕಳಿಸುವಾಗ ಅವರ ವಿನಂತಿ ಪತ್ರದೊಂದಿಗೆ ಕಳಿಸಿದ್ದಾರೆ. ಕಳಿಸಿರುವ ಬಾಟ್ಲಿಗಳ ಕುರಿತು ರಾಸಾಯನಿಕ ತಜ್ಞರಿಂದ ಪ್ರಮಾಣ ಪತ್ರ ವರದಿಯನ್ನು ಪಡೆದಿರುತ್ತಾರೆ. ಈಗ ಅವರು ನೋಡುತ್ತಿರುವ ರಸಾಯನಿಕ ಪರೀಕ್ಷಕರ ವರದಿಯು ನಿಪಿ-6 ಎಂದು ಗುರುತಿಸಲಾಯಿತು. ಅದರ ಮೇಲಿನ ಅವರ ಸಹಿಯನ್ನು ನಿಪಿ-6 ಎ ಅಂತಾ ಗುರುತಿಸಲಾಯಿತು. ರಸಾಯನಿಕ ಪರೀಕ್ಷೆ ಆದ ನಂತರ ಮುದ್ದೆಮಾಲನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂ ಇವರಿಗೆ ಜಪ್ತಾದ ಮುದ್ದೆಮಾಲನ್ನು ಮುಟ್ಟುಗೋಲು ಹಾಕಿಕೊಳ್ಳಲು ಬರೆದ ಪತ್ರ ಈಗ ನೋಡುತ್ತಿದ್ದು ಅದು ನಿಪಿ-7 ಅಂತಾ ಗುರುತಿಸಲಾಯಿತು. ಅದರ ಮೇಲಿನ ಅವರ ಸಹಿಯನ್ನು ನಿಪಿ-7 ಎ ಅಂತಾ ಗುರುತಿಸಲಾಯಿತು. ದಿನಾಂಕ: 28.6.2002 ರಂದು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಇವರ ಆದೇಶದನ್ವಯ ಮದ್ಯದ ಬಾಟ್ಲಿಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶದ ಪತ್ರವನ್ನು ನೋಡುತ್ತಿದ್ದು ಅದನ್ನು ನಿಪಿ-8 ಅಂತಾ ಗುರುತಿಸಲಾಯಿತು. ಮದ್ಯದ ಬಾಟ್ಲಿಗಳನ್ನು ಸದರಿ ಆದೇಶದ ಪ್ರಕಾರ ಸನ್ನದುದಾರರಿಗೆ ಲೀಲಾವು ಮಾಡಿದ್ದು ಬಂದ ಹಣವನ್ನು ಸರಕಾರಕ್ಕೆ ಜಮಾ ಮಾಡಿರುತ್ತದೆ. ನಂತರ ವಾಹನ ಪರ ವಕೀಲರು ಪಾಟೀ ಸವಾಲು ಶ್ರೀ ಬಿ. ಆರ್. ಕಾದ್ರೋಳ್ಳಿ ವಕೀಲರು ಮಾಡಿದ್ದು: ಜಪ್ತಾದ ಮುದ್ದೆಮಾಲಿನ ಬಗ್ಗೆ ಸಂಬಂಧಪಟ್ಟ ಡಿಸ್ಟಿಲರಿಗೆ ಹೋಗಿ ವಿಚಾರಣೆ ಮಾಡಿರುವುದಿಲ್ಲ. ಡಿಸ್ಟಿಲರಿಯವರಿಗೆ ನಾನು ನೋಟಿಸು ನೀಡಿರುವುದಿಲ್ಲ. ರಸಾಯನಿಕ ಪರೀಕ್ಷೆಗೆ ಕಳುಹಿಸಿದ ಅಬಕಾರಿ ರಕ್ಷಕರ ಹೇಳಿಕೆಯನ್ನು ಪಡೆದಿಲ್ಲ. ಈ ಕೇಸಿನಲ್ಲಿ ಜಪ್ತಾದ ಮುದ್ದೆ ಮಾಲು ಗುನ್ನೆಗೆ ಸಂಬಂಧಪಟ್ಟಿದ್ದು ಇರುತ್ತದೆ. ಆಫೀಸಿನಲ್ಲಿರುವ ಅನ್‌ಕ್ಲೇಮ್ಡ್ ಪ್ರಾಪರ್ಟಿ ಮೇಲೆ ಸರಕಾರಕ್ಕೆ ಆದಾಯ ಬರುವ ಸಲುವಾಗಿ ಮತ್ತು ವಿಲೇವಾರಿ ಮಾಡುವ ಸಲುವಾಗಿ ಸುಳ್ಳು ಕೇಸು ಹಾಕಿಲ್ಲವೆಂದು ತಮ್ಮ ಹೇಳಿಕೆಯಲ್ಲಿ ತಿಳಿಸಿರುತ್ತಾರೆ. ಇದರಿಂದ ವಾಹನ ಪರ ವಕೀಲರಿಗೆ ಯಾವುದೇ ಪ್ರಯೋಜನಕಾರಿಯಾದ ಅಂಶಗಳು ಕಂಡುಬರುವುದಿಲ್ಲ. ಪ್ರಾ.ಸಾ-1, ಪ್ರಾ.ಸಾ-2, ಮತ್ತು ಪ್ರಾ.ಸಾ-3 ರ ಹೇಳಿಕೆಯ ಮೇರೆಗೆ ದಿನಾಂಕ: 9.6.2000 ರಂದು ವಾಹನ ಸಂ.ಕೆಎ-24-2063 ಟೆಂಪೊದಲ್ಲಿ 145 ಮದ್ಯ ಪೆಟ್ಟಿಗೆಗಳ ಅಕ್ರಮ ಮದ್ಯ ಸಾಗಾಣಿಕೆ ಆಗಿದೆ ಎಂದು ಪ್ರಾಧಿಕಾರಕ್ಕೆ ಮನವರಿಕೆ ಆಗುವುದರಿಂದ ಒಂದನೆಯ ವಿವಾದಾಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಮೆಹಬೂಬ್‌ಸಾಬ್ ಆದಮ್‌ಸಾಬ ಹಿರೇಕರ ಇವರು ವಾಹನ ಮಾಲೀಕರಿದ್ದು ಇವರು ಹೇಳಿಕೆಯನ್ನು ದಿನಾಂಕ: 19.6.2003 ರಂದು ಡಿಡಬ್ಲ್ಯೂ 1 ಆಗಿ ಪಡೆಯಲಾಗಿದೆ. ಅವರು ಈ ಪ್ರಕರಣದಲ್ಲಿ ಜಪ್ತಾದ ವಾಹನ ನಂ. ಕೆಎ-24-2063 ನೇದ್ದರ ನೋಂದಾಯಿತ ಮಾಲೀಕರಿದ್ದಾರೆ. ಈ ಬಗ್ಗೆ ದಾಖಲೆ ಹಾಜರುಪಡಿಸಿದ್ದಾರೆ. ಸದರಿ ವಾಹನವನ್ನು ಅವರು ಮಲಪ್ರಭಾ ಗ್ರಾಮೀಣ ಬ್ಯಾಂಕ್, ಬೈಲಹೊಂಗಲ ಶಾಖೆ ಸಾಲದ ಹಣದಿಂದ ಪಡೆದುಕೊಂಡಿದ್ದಾರೆ. ಅವರಿಗೆ ವಾಹನವನ್ನು ಹೊರತುಪಡಿಸಿ ಬೇರೆ ಉತ್ಪನ್ನ ಇರುವುದಿಲ್ಲ. ವಾಹನದಿಂದ ಬರುವ ಆದಾಯದಿಂದ ಜೀವನ ಸಾಗಿಸುತ್ತೇನೆ ಮತ್ತು ಸಾಲ ಕಟ್ಟುತ್ತಿದ್ದೇನೆ. ವಾಹನವನ್ನು ನಡೆಸಲು ಗೌಸ ತಾಳಿಕೋಟೆ ಸಾ: ಸಂಪಗಾಂವ ಇವನನ್ನು ಚಾಲಕನೆಂದು ನೇಮಿಸಿಕೊಂಡಿದ್ದಾರೆ. ಆತನಿಗೆ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡಬಾರದೆಂದು ತಾಕೀತು ಮಾಡಿದ್ದಾರೆ. ಆತನು ವಾಹನವನ್ನು ಪ್ರತಿ ದಿನ ಸಾಯಂಕಾಲ ಅವರ ಮನೆಯ ಮುಂದೆ ನಿಲ್ಲಿಸಿ ಅದರ ಚಾವಿಕೊಟ್ಟು ಹೋಗುತ್ತಾನೆ. ವಾಹನದ ಉಸ್ತುವಾರಿ ಇವರೇ ಮಾಡುತ್ತಾರೆ. ದಿನಾಂಕ: 9.6.2000 ರಂದು ವಾಹನವನ್ನು ಚಾಲಕನಿಗೆ ಕೊಟ್ಟು ಮದುವೆಗೆ ಹೋಗಿದ್ದರು. ಸಾಯಂಕಾಲ ಮತ್ತು ರಾತ್ರಿ ವಾಹನ ಹಿಂತಿರುಗಿ ಬರಲಿಲ್ಲ. ಆ ಸಮಯದಲ್ಲಿ ಅಸೆಂಬ್ಲಿ ಚುನಾವಣೆ ಇತ್ತು. ಮರುದಿನ ಸಾಯಂಕಾಲ ಅವರಿಗೆ ವಾಹನ ಜಪ್ತಾದ ಬಗ್ಗೆ ಗೊತ್ತಾಯಿತು. ಅವರು ತಮ್ಮ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಟ ಮಾಡಿರುವುದಿಲ್ಲ. ಅವರಿಗೆ ಸದರಿ ವಾಹನದಲ್ಲಿ ಮದ್ಯ ಸಾಗಾಟ ಮಾಡಿದ ಬಗ್ಗೆ ಯಾವ ಸಂಗತಿ ಗೊತ್ತಿರಲಿಲ್ಲ. ಅವರು ಅಬಕಾರಿ ಕಾಯ್ದೆ ಉಲ್ಲಂಘನೆ ಮಾಡಿರುವುದಿಲ್ಲ. ಆದ್ದರಿಂದ ಅವರ ವಾಹನವನ್ನು ಅವರಿಗೆ ಹಿಂದಿರುಗಿ ಕೊಡಬೇಕೆಂದು ವಿನಂತಿಸಿದ್ದಾರೆ. ವಾಹನವನ್ನು ಹಿಂದಿರುಗಿಸದಿದ್ದರೆ ಅವರ ಜೀವನೋಪಾಯಕ್ಕೆ ತೊಂದರೆಯಾಗುತ್ತದೆ ಎಂದು ತಮ್ಮ ಹೇಳಿಕೆಯಲ್ಲಿ ತಿಳಿಸಿದ್ದಾರೆ. ನಂತರ ಮಾನ್ಯ ಎ.ಡಿ.ಪಿ ಇವರು ವಾಹನ ಮಾಲೀಕರಿಗೆ ಪಾಟೀ ಸವಾಲು ಮಾಡಿರುತ್ತಾರೆ: ದಿನಾಂಕ: 9.6.2000 ರಂದು ಅವರ ವಾಹನದಲ್ಲಿ ಅವರೇ ತಮ್ಮ ಫಾಯದೆಗಾಗಿ ಮದ್ಯದ ಬಾಟ್ಲಿಗಳನ್ನು ಸಾಗಾಟ ಮಾಡಿಸುತ್ತಿದ್ದರು ಅಂದರೆ ಸರಿಯಲ್ಲ. ವಾಹನದ ಚಾಲಕನಿಗೆ ಮದ್ಯ ಸಾಗಾಟ ಮಾಡಲು ಅವರು ತಮ್ಮ ಸಂಪೂರ್ಣ

ಒಪ್ಪಿಗೆ ಕೊಟ್ಟಿದ್ದರು ಮತ್ತು ತಮ್ಮ ಹೇಳಿಕೆಯ ಮೇರೆಗೆ ಆತನು ಮದ್ಯ ಸಾಗಾಟ ಮಾಡುತ್ತಿದ್ದನು ಎಂದರೆ ಸರಿಯಲ್ಲ. ಚಾಲಕನ ನೇಮಕಾತಿ ಬಗ್ಗೆ ಮತ್ತು ಆತನಿಗೆ ಅವರು ಅಕ್ರಮ ಮದ್ಯ ಸಾಗಾಟ ಮಾಡದಂತೆ ತಾಕೀತು ಮಾಡಿದ ಬಗ್ಗೆ ಯಾವುದೇ ದಾಖಲೆಗಳನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿಲ್ಲ ಅಂದರೆ ಸರಿ. ಅವರು ತಮ್ಮ ವಾಹನವನ್ನು ಮೊದಲಿನಿಂದಲೂ ಅಕ್ರಮ ಮದ್ಯ ಸಾಗಾಟ ಮಾಡಲು ಉಪಯೋಗ ಮಾಡುತ್ತಿದ್ದರೆಂದರೆ ಸರಿಯಲ್ಲ. ಅವರು ಅಪರಾಧ ಮಾಡಿರುವುದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ ಎಂದರೆ ಸರಿಯಲ್ಲವೆಂದು ತಿಳಿಸಿರುತ್ತಾರೆ.

ಸದರಿ ಅಪರಾಧವು ತಮ್ಮ ತಿಳುವಳಿಕೆಗೆ ಬಾರದಂತೆ ನಡೆದಿತ್ತು ಎಂದು ಸಿದ್ದಪಡಿಸುವ ಜವಾಬ್ದಾರಿ ವಾಹನ ಮಾಲೀಕರದ್ದು ಆಗಿದ್ದು ಡಿಡಬ್ಲ್ಯೂ 1 ಇವರ ಹೇಳಿಕೆಗಳನ್ನು ಗಮನಿಸಲಾಗಿ ಮದ್ಯದ ಅಕ್ರಮ ಸಾಗಾಟವಾಗಬಾರದಂತೆ ಯಾವುದೇ ಕ್ರಮ ತೆಗೆದುಕೊಂಡಿಲ್ಲ ಮತ್ತು ಅದನ್ನು ಸಿದ್ದಪಡಿಸಲು ಸದರಿಯವರು ವಿಫಲರಾಗಿರುತ್ತಾರೆ. ಆದ್ದರಿಂದ ಎರಡನೆಯ ಪ್ರಶ್ನೆಗೆ ಉತ್ತರ ಇಲ್ಲವೆಂದು ಪರಿಗಣಿಸಲಾಗಿದೆ.

ಈ ಎಲ್ಲ ಕಾರಣಗಳಿಂದ ಪ್ರಕರಣದಲ್ಲಿ ಜಪ್ತಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಶ್ರೀ ಪಿ. ಎನ್. ಮುರಗೋಡ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬೆಳಗಾಂವ ಜಿಲ್ಲೆ ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರ ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ ಇವರು ದಾಖಲು ಮಾಡಿದ ಗುನ್ಹೆ ನಂ. 32/99-2000 ದಿನಾಂಕ: 9.6.2000 ರಲ್ಲಿ ಜಪ್ತಾದ ವಾಹನ ಸಂ. ಕೆಎ-24-2063, (407) ಇದನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಪ್ರಕರಣದಲ್ಲಿ ಜಪ್ತಾದ ಮದ್ಯವನ್ನು ಈ ಪ್ರಾಧಿಕಾರದ ಆದೇಶ ದಿನಾಂಕ: 28.6.2000 ರ ಮೇರೆಗೆ ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದೆ.

ಈ ಆದೇಶವನ್ನು ಇಂದು ದಿನಾಂಕ: 17.07.2003 ರಂದು ಉಕ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಣ ಮಾಡಿಸಿ ಪ್ರತಿಯನ್ನು ತಿದ್ದಿ, ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಪಿ. ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | | |
|---|---|---|---|
| ಪ್ರಾ.ಸಾ. 1 | - | ಶ್ರೀ ಸೂರ್ಯಕಾಂತ ಜಿಂದೆ, ಅಬಕಾರಿ ಇನ್‌ಸ್ಪೆಕ್ಟರ್, ಇ.ಐ.ಬಿ. ಬೆಳಗಾಂವ | - ಫಿರ್ಯಾದಿ |
| ಪ್ರಾ.ಸಾ. 2 | - | ಶ್ರೀ ಮಾಣಿಕ ವಾಸುದೇವ ಶೆಟ್ಟಿ ಸಾ: ಶೆಟ್ಟಿಗಲ್ಲಿ, ಬೆಳಗಾಂವ | - ಪಂಚ |
| ಪ್ರಾ.ಸಾ.3 | - | ಶ್ರೀ ಭೀಮಾ ಮಾರುತಿ ಫೋಟೆ, ಅಬಕಾರಿ ಇನ್ಸ್‌ಪೆಕ್ಟರ್, ಬೈಲಹೊಂಗಲ ವಲಯ | - ತನಿಖಾಧಿಕಾರಿ |

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | | |
|---|---|---|---|
| ನಿಶಾನೆ | ಪಿ-1 | - | ಪಂಚನಾಮೆಯ ಮೂಲ ಪ್ರತಿ. |
| ನಿಶಾನೆ | ಪಿ-1ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-1(1) | - | ದೃಢೀಕೃತ ಕಾರ್ಬನ್ ಪ್ರತಿ. |
| ನಿಶಾನೆ | ಪಿ-1(1ಎ) | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-1(1ಬಿ) | - | ಪಂಚ ಸಾಕ್ಷಿದಾರನ ಸಹಿ. |
| ನಿಶಾನೆ | ಪಿ-2 | - | ಸರ್ಕಾರದ ತರ್ಫೆ ಫಿರ್ಯಾದಿನ ಕಾರ್ಬನ್ ಪ್ರತಿ. |
| ನಿಶಾನೆ | ಪಿ-2ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-3 | - | ಪ್ರಥಮ ವರ್ತಮಾನ ವರದಿಯ ಕಾರ್ಬನ್ ಪ್ರತಿ. |
| ನಿಶಾನೆ | ಪಿ-3ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-4 | - | ಕ.ಅ.ಕಾ 1965ರ ಕಲಂ 54ರ ಪ್ರಕಾರ ನ್ಯಾಯಾಲಯಕ್ಕೆ ಬರೆದ ವರದಿ ಕಾರ್ಬನ್ ಪ್ರತಿ |
| ನಿಶಾನೆ | ಪಿ-4ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-5 | - | ಮುದ್ದೆಮಾಲನ್ನು ತಾಬಾದಲ್ಲಿಟ್ಟುಕೊಳ್ಳಲು ಬರೆದ ಅನುಮತಿ ಪತ್ರದ ಪ್ರತಿ. |
| ನಿಶಾನೆ | ಪಿ-5ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-6 | - | ಮೂಲ ರಾಸಾಯನಿಕ ಪ್ರಮಾಣ ಪತ್ರದ ದೃಢೀಕೃತ ಪ್ರತಿ. |

| | | | |
|---|---|---|---|
| ನಿಶಾನೆ | ಪಿ-6ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-7 | - | ಜಪ್ತಾದ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬರೆದ ಪತ್ರ |
| ನಿಶಾನೆ | ಪಿ-7ಎ | - | ಅದರ ಮೇಲಿನ ಅವರ ಸಹಿ. |

**ಅನುಬಂಧ - 3**

**ಫಿರ್ಯಾದುದಾರರ ಪರ ಗುರುತಿಸಲಾದ ವಸ್ತುಗಳು:**

1. ಮುದ್ದೆ ಮಾಲು-1 - ಜಪ್ತಾದ ವಾಹನ ಸಂಖ್ಯೆ: ಕೆಎ-24-2063(407).

**ಅನುಬಂಧ - 4**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

1) ಸಾಕ್ಷಿ 1 - ಶ್ರೀ ಮೆಹಬೂಬ್ ಆದಮ್‌ಸಾಬ್ ಹಿರೇಕರ, ಸಾ: ಸಂಪಗಾಂವ
ತಾ: ಬೈಲಹೊಂಗಲ - ವಾಹನ ಮಾಲೀಕರು

**ಅನುಬಂಧ - 5**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ

**ಪಿ. ಎನ್. ಮುರಗೋಡ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ಬೆಳಗಾಂವ ಜಿಲ್ಲೆ, ಬೆಳಗಾಂವ.

ಪಿ.ಆರ್.1029

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಇತರೆ ದಾವಾ ನಂ.9: 2002-03**

| **ಅರ್ಜಿದಾರರು** | **ವಿರುದ್ಧ** | **ಎದುರು ಅರ್ಜಿದಾರರು** |
|---|---|---|
| ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ಅಂತರಗಂಗೆ, ಭದ್ರಾವತಿ ತಾಲ್ಲೂಕು, ಇವರ ಪರವಾಗಿ ವ್ಯವಸ್ಥಾಪಕರು. | | 1) ಕೆ. ಬಿ. ನಾಗರಾಜ್, ಬಿನ್. ಚಿಕ್ಕಬೋರಯ್ಯ, ಮಾರಾಟ ಗುಮಾಸ್ತರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಅಂತರಗಂಗೆ, ಭದ್ರಾವತಿ ತಾಲ್ಲೂಕು. **ಖಾಯಂ ವಿಳಾಸ** ಅಂತರಗಂಗೆ ಕ್ಯಾಂಪ್ (ಅಂಚೆ), ಭದ್ರಾವತಿ ತಾಲ್ಲೂಕು. |
| | | 2) ಮರಿಗೌಡ, ಬಿನ್ ಕರೀಗೌಡ, ಅಂತರಗಂಗೆ ಅಂಚೆ, ಭದ್ರಾವತಿ ತಾಲ್ಲೂಕು. |
| | | 3) ಡಿ. ಕೆ. ಗಂಗಣ್ಣ, ಬಿನ್ ಡಿ. ಬಿ.ಕೃಷ್ಣಪ್ಪ, ರತ್ನಪುರ, ಅಂತರಗಂಗೆ, ಭದ್ರಾವತಿ ತಾಲ್ಲೂಕು. |

**(ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಪೂರ್ವ ಜಪ್ತು ಆಜ್ಞೆಗೆ ತಿದ್ದುಪಡಿ ಆದೇಶ)**

**"ತಿದ್ದುಪಡಿ ಆದೇಶ"**

**ಕ್ರಮಾಂಕ: ಸನಿಶಿ24:ಎಬಿಎನ್:1:03-04: 799 ದಿನಾಂಕ: 28ನೇ ಆಗಸ್ಟ್ 2003.**

ಈ ಕಛೇರಿಯಿಂದ ತೀರ್ಪು ಪೂರ್ವ ಜಪ್ತು ಆದೇಶದ ನೋಟೀಸ್ ಸಂಖ್ಯೆ: ಸನಿಶಿ24: ಎಬಿಎನ್: ಕಲಂ 103:02-03: 785 ದಿನಾಂಕ: 25.08.2003 ರೀತ್ಯಾ ನೀಡಿದ್ದು, ಸದರಿ ನೋಟೀಸ್‌ನಲ್ಲಿನ ಮೊದಲನೇ ಪುಟದ ಪ್ರಸ್ತಾವನೆಯಲ್ಲಿ ಎದುರು ಅರ್ಜಿದಾರರ ವಿರುದ್ಧ 1998-99, 1999-2000 ಮತ್ತು 2000-01ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ.5920-20 ಗಳ ದುರುಪಯೋಗ ವಸೂಲಿ ಬಗ್ಗೆ ಎಂದು ನಮೂದಾಗಿರುವುದನ್ನು "ಎದುರು ಅರ್ಜಿದಾರರ ವಿರುದ್ಧ 1998-1999, 1999-2000 ಮತ್ತು 2000-2001ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ.50920-20 ಗಳ ದುರುಪಯೋಗ ವಸೂಲಿ ಬಗ್ಗೆ" ಎಂದು ಓದಿಕೊಳ್ಳತಕ್ಕದ್ದೆಂದು ಈ ಮೂಲಕ ತಿದ್ದುಪಡಿ ಆದೇಶ ಹೊರಡಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 28.8.2003 ರಂದು ನನ್ನ ಸಹಿ ಮತ್ತು ಕಛೇರಿ ಮೊಹರಿನೊಡನೆ ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್.1030

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ

## ಅಧಿಭಾರ ಅರ್ಜಿ ನಂ. 6: 2002-03

| ಅರ್ಜಿದಾರರು | ವಿರುದ್ಧ | ಎದುರು ಅರ್ಜಿದಾರರು |
|---|---|---|
| ಕಡೇಕಲ್ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ಕಡೇಕಲ್, ಶಿವಮೊಗ್ಗ ತಾಲ್ಲೂಕು ಇವರ ಪರವಾಗಿ ಇದರ ವ್ಯವಸ್ಥಾಪಕರು | | ಶ್ರೀ ಎಸ್. ಎಂ. ತಿಮ್ಮಯ್ಯ ಬಿನ್ ಮೂಡ್ಲಗಿರಿಯಪ್ಪ, ಮಾಜಿ ಕಾರ್ಯದರ್ಶಿ, ವಿಎಸ್‌ಎಸ್‌ಬಿಎನ್, ಕಡೇಕಲ್, ಹಾಲಿ ವಾಸ: ಹೊನ್ನನಾಯಕನಹಳ್ಳಿ, ಗರಗ ಅಂಚೆ, ಚನ್ನಗಿರಿ ತಾಲ್ಲೂಕು. |

**(ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಸಂಘವು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1999-2000, ಮತ್ತು 2000-2001ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ.4,46,322-35 ಗಳ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 12.08.2003 ರಂದು ನಡೆದ ವಿಚಾರಣೆ ದಿನಾಂಕದಂದು ಅರ್ಜಿಯನ್ನು ನೀಡಿ ಎದುರಿಯು ಸಂಘದ ಹಣವನ್ನು ದುರುಪಯೋಗಪಡಿಸಿಕೊಂಡು ಸಾಕಷ್ಟು ಆಸ್ತಿಗಳನ್ನು ಸಂಪಾದಿಸಿರುತ್ತಾರೆ. ಅಲ್ಲದೇ ತನ್ನ ಹೆಸರಿನಲ್ಲಿ ಯಾವೊಂದು ಆಸ್ತಿಯನ್ನು ಎದುರಿ ಇಟ್ಟುಕೊಂಡಿರುವುದಿಲ್ಲ. ಎದುರಿಯು ಆಸ್ತಿಗಳನ್ನು ತನ್ನ ಹೆಂಡತಿಯ ಹೆಸರಿನಲ್ಲಿ ಮಾಡಿರುವುದು ದಾಖಲೆಗಳಿಂದ ಸ್ಪಷ್ಟವಾಗುತ್ತವೆ. ಇದು ಅರ್ಜಿದಾರರಿಗೆ ನಂಬಲರ್ಹವಾದ ಮೂಲಗಳಿಂದ ತಿಳಿದು ಬಂದಂತೆ, ಎದುರುದಾರನು ತನ್ನ ಹೆಂಡತಿಯ ಹೆಸರಿನಲ್ಲಿ ಇರುವ ಆಸ್ತಿಗಳನ್ನು ಮಾರಿ ತನ್ನ ಕುಟುಂಬದೊಂದಿಗೆ ತಲೆಮರೆಸಿಕೊಳ್ಳುವ ಸಾಧ್ಯತೆಗಳು ಇರುತ್ತದೆ. ಆದ್ದರಿಂದ ಎದುರಿಯಿಂದ ಅರ್ಜಿದಾರರಿಗೆ ಬರಬೇಕಾದ ಹಣಕ್ಕಾಗಿ ಎದುರಿಯವರ ಪತ್ನಿಯಾದ ಶ್ರೀಮತಿ ಜಯಮ್ಮ ಕೋಂ ತಿಮ್ಮಯ್ಯ, ಇವರ ಹೆಸರಿನಲ್ಲಿರುವ ಆಸ್ತಿಗಳನ್ನು ಆದೇಶಕ್ಕಿಂತ ಪೂರ್ವದಲ್ಲಿ ಸಹಕಾರ ಕಾಯ್ದೆ ಕಲಂ 103 ರಡಿಯಲ್ಲಿ ಜಪ್ತಿ ಮಾಡುವುದು ಸೂಕ್ತವೆನಿಸುತ್ತದೆ. ಹಾಗೂ ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಸಹ ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತ: ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತುಪೂರ್ವಕ ಜಪ್ತು ಆಜ್ಞೆಯನ್ನು ಹೊರಡಿಸಲಾಗಿದೆ.

### ಆದೇಶ

**ಕ್ರಮಾಂಕ: ಸನಿಶಿ 24:ಎಬಿಎನ್:ಕಲಂ 103:02-03 /807: ದಿನಾಂಕ: 26ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಪ್ರಕಾಶ್‌ರಾವ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಈ ದಾವೆಯ ತೀರ್ಪು ಪೂರ್ವದಲ್ಲಿ ಷರತ್ತುಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ, ಎದುರು ಅರ್ಜಿದಾರರುಗಳು ತಮ್ಮ ಆಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ, ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀದಿ ಅಥವಾ ಚಲನ್ನಿನ ಪ್ರತಿಯನ್ನು ದಿನಾಂಕ: 15.9.2003 ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ, ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತುಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದು ಎಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತುಪೂರ್ವಕ ಆದೇಶಕ್ಕೆ ಒಳಗಾದ ಸ್ವತ್ತುಗಳು**

**ಅನುಸೂಚಿ: ಷೆಡ್ಯೂಲ್**

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಜಯಮ್ಮ ಕೋಂ ತಿಮ್ಮಯ್ಯ | ಚನ್ನಗಿರಿ ತಾಲ್ಲೂಕು ಕಸಬಾ ಹೋಬಳಿ ಗರಗ ಗ್ರಾಮ | ಸರ್ವೆನಂ.43 ಎಂಆರ್13: 88-89 | 5.00 ಎಕರೆ | ಖುಷ್ಕಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 26.8.2003 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್.1031

**ಮುಖ್ಯ ಸಂಶೋಧನಾಧಿಕಾರಿ ಕರಾವಳಿ ಇಂಜಿನಿಯರಿಂಗ್ ವಿಭಾಗ ಕೆ.ಇ.ಆರ್.ಎಸ್., ಕೆ.ಆರ್. ಸಾಗರ**

**ಕ್ರ.ಸಂ: ಮುಸಂಶ: ಕಇಂವಿ: ಸಿ-1: 03-04: 650-51: ದಿನಾಂಕ: 4ನೇ ಸೆಪ್ಟೆಂಬರ್ 2003**

**ನೋಟೀಸ್**

ಇವರಿಗೆ,

ಶ್ರೀ ಎಸ್. ಕೃಷ್ಣಕುಮಾರ್
'ಡಿ' ಗ್ರೂಪ್ ನೌಕರರು,
ಸನ್ ಆಫ್ ಲೇಟ್ ಶ್ರೀನಿವಾಸಯ್ಯ,
ಮದ್ದೂರ್ ಫೈಲ್,
ಕೆ. ಆರ್. ಸಾಗರ

ಈ ಮೂಲಕ ತಿಳಿಸುವುದೇನೆಂದರೆ ನೀವು ದಿನಾಂಕ: 17.06.2003 ರಿಂದ ಕಛೇರಿಗೆ ಅನಧಿಕೃತ ಗೈರುಹಾಜರಾಗಿರುತ್ತೀರಿ. ಕೆಲಸಕ್ಕೆ ಹಾಜರಾಗಲು ಸೂಚಿಸಿ ಈ ಕಛೇರಿಯಿಂದ ಕಳುಹಿಸಿದ ನೊಂದಣಿ ಅಂಚೆಯನ್ನು ನೀವು ದಿನಾಂಕ: 10.07.2003 ರಂದು ಸ್ವೀಕರಿಸಿದ್ದಾಗ್ಯೂ ಇದುವರೆಗೂ ಕೆಲಸಕ್ಕೆ ಹಾಜರಾಗಿಲ್ಲ. ಈ ನೋಟೀಸ್ ಪ್ರಕಟಗೊಂಡ ದಿನವೇ ಕೆಲಸಕ್ಕೆ ಹಾಜರಾಗಿ ವಿವರಣೆಯನ್ನು ನೀಡುವುದು. ಇಲ್ಲವಾದ್ದಲ್ಲಿ ಕರ್ನಾಟಕ ನಾಗರೀಕ ನಡತೆ ನಿಯಮಾವಳಿಗಳು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ: 18: ಸೇಇವಿ: 2001 ಬೆಂಗಳೂರು, ದಿನಾಂಕ: 14.09.2001ರಲ್ಲಿನ ಕಂಡಿಕೆ (1) ಮತ್ತು (2)ರಲ್ಲಿ ಸೂಚಿಸಿರುವಂತೆ ನಿಮ್ಮನ್ನು ಸೇವೆಯಿಂದ ತೆಗೆದು ಹಾಕಲು ಕ್ರಮ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ನಿಮಗೆ ತಿಳಿಸಲಾಗಿದೆ.

ಮುಖ್ಯ ಸಂಶೋಧನಾಧಿಕಾರಿ
ಪಿ.ಆರ್.1032 ಕರಾವಳಿ ಇಂಜಿನಿಯರಿಂಗ್ ವಿಭಾಗ ಕೆ.ಇ.ಆರ್.ಎಸ್.ಕೆ.ಆರ್. ಸಾಗರ

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ,**

**ಮಂಗಳೂರುರವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ:4:ಡಿಟಿಸಿಆರ್:1999-2000.**

**ಉಪಸ್ಥಿತರು: ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದ.ಕ. ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು** | **ವಿರುದ್ಧ** | **ಆರೋಪಿಗಳು** |
|---|---|---|
| ಶ್ರೀ ಜಿ. ಕೆ. ಸುಬ್ರಮಣ್ಯ | | 1. ಶ್ರೀಮತಿ ನೀಲಮ್ಮ |
| ಅಬಕಾರಿ ನಿರೀಕ್ಷಕರು, | | ಕೋಂ: ಕೆ. ಕೃಷ್ಣ |
| ಅಬಕಾರಿ ಗುಪ್ತವಾರ್ತಾದಳ | | ಸಂಖ್ಯೆ: ಇ.ಬಿ.28, ಕೆ.ಇ.ಬಿ ಕಾಲೋನಿ, |
| ಮಂಗಳೂರು ವಿಭಾಗ, ಮಂಗಳೂರು. | | ಕಾವೂರು, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 4.07.1999 ರಂದು ಮಂಗಳೂರು ಗುಪ್ತವಾರ್ತಾದಳದ ಅಬಕಾರಿ ನಿರೀಕ್ಷಕರು ಮಂಗಳೂರು ತಾಲ್ಲೂಕು ಕಾವೂರು ಗ್ರಾಮದ ಕಾವೂರು ಕೂಳೂರು ರಸ್ತೆಯ ಶಂಕರ್‌ವರ್ಕ್ಸ್ ಹತ್ತಿರ ರಸ್ತೆಗಾವಲು ನಡೆಸುತ್ತಿರುವಾಗ ಸುಮಾರು ರಾತ್ರಿ 8.30 ರ ಸಮಯದಲ್ಲಿ ಕಾವೂರು ಕಡೆಯಿಂದ ಕೂಳೂರು ಕಡೆಗೆ ಒಂದು ಆಟೋರಿಕ್ಷಾ ಬರುತ್ತಿದ್ದು ಅದನ್ನು ನಿಲ್ಲಿಸಲು ಸೂಚಿಸಲಾಗಿ ಆಟೋರಿಕ್ಷಾವು 25 ಗಜ ದೂರದಲ್ಲಿ ನಿಂತಿತು. ಆಟೋರಿಕ್ಷಾವು ನಿಂತ ಕೂಡಲೇ ಒಬ್ಬ ಅಸ್ಸಾಮಿಯು ಆಟೋ ಇಳಿದು ಓಡಿಹೋದನು. ಅನುಮಾನದಿಂದ ಆತನನ್ನು ಹಿಡಿಯಲು ಪ್ರಯತ್ನಿಸಲಾಗಿ ಕತ್ತಲ್ಲಲ್ಲಿ ಪರಾರಿಯಾದನು. ನಂತರ ರಿಕ್ಷಾದಲ್ಲಿ ಇದ್ದ ಇಬ್ಬರಲ್ಲಿ ಒಬ್ಬ ಆಟೋ ಚಾಲಕನಾಗಿದ್ದು, ಇನ್ನೊಬ್ಬ ಆಸಾಮಿಯು ಹಿಂದಿನ ಸೀಟಿನಲ್ಲಿ ಕುಳಿತಿದ್ದು ಆತನು ಕುಳಿತಿದ್ದ ಸೀಟಿನ ಮುಂಭಾಗ ಕಾಲು ಇಡುವ ಸ್ಥಳದಲ್ಲಿ ದ್ರಾವಕ ತುಂಬಿರುವ ರಬ್ಬರ್ ಟ್ಯೂಬುಗಳು ಕಂಡು ಬಂದವು. ನಂತರ ಆಟೋರಿಕ್ಷಾದ ಶೋಧನೆ ಬಗ್ಗೆ ನ್ಯಾಯಾಲಯದಿಂದ ವಾರೆಂಟು ಪಡೆದುಕೊಳ್ಳಲು ಕಾಲಾವಕಾಶವಿಲ್ಲದ್ದರಿಂದ ಸರ್ಚ್‌ವಾರೆಂಟು ತಯಾರಿಸಿ ಪಂಚರ ಸಮಕ್ಷಮ ರಿಕ್ಷಾವನ್ನು ಶೋಧನೆ ಮಾಡಲಾಗಿ ಸದ್ರಿ ರಿಕ್ಷಾದಲ್ಲಿ ಮೂರು ರಬ್ಬರ್ ಟ್ಯೂಬುಗಳಿದ್ದು ಪ್ರತಿಯೊಂದು ಟ್ಯೂಬಿನಲ್ಲಿ ತಲಾ 40 ಲೀಟರು ಕಳ್ಳಭಟ್ಟಿ ಸಾರಾಯಿ ಇರುವುದು ಕಂಡುಬಂದ್ದಿದ್ದು ಈ ಬಗ್ಗೆ ಯಾವುದೇ ದಾಖಾಲಾತಿಗಳನ್ನು ಹಾಜರು ಪಡಿಸದೇ ಇದ್ದುದರಿಂದ ಇದು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟವೆಂದು ತೀರ್ಮಾನಿಸಿ ಸದ್ರಿ ಟ್ಯೂಬುಗಳಿಂದ 3 ಸೀಸೆಗಳಿಗೆ 180 ಮಿಲಿ ಲೀಟರ್‌ನಂತೆ ಮಾದರಿ ತೆಗೆದು ಸೀಸೆಗಳಿಗೂ ಮತ್ತು ಟ್ಯೂಬುಗಳಿಗೂ ಇಲಾಖೆಯ ಸೀಲಿನಿಂದ ಸೀಲು ಮಾಡಿ. ಆರೋಪಿಗಳ ಹೆಸರು ವಿಳಾಸವನ್ನು ಕೇಳಲಾಗಿ ರಿಕ್ಷಾ ಚಾಲಕನು ತನ್ನ ಹೆಸರು ಕಂದನ್ ಬಿನ್ ಕೃಷ್ಣ ಎಂದು ಪ್ರಾಯ: 21 ವರ್ಷವೆಂದು ಕೆ.ಇ.ಬಿ. ಕಾಲೋನಿ. ಬಾಗಿಲು ಸಂ. 28 ಕಾವೂರು ಗ್ರಾಮ. ಮಂಗಳೂರು ತಾಲ್ಲೂಕು ಎಂದು ತಿಳಿಸಿರುತ್ತಾರೆ. ಆಟೋದಲ್ಲಿ ಹಿಂದೆ ಕುಳಿತಿದ್ದ ವ್ಯಕ್ತಿ ಆನಂದ ಎಂದು. ಓಡಿಹೋದವನು ಜೋಕಿಮ್ ಡಿಸೋಜಾ ಎಂದು ತಿಳಿಸಿರುತ್ತಾರೆ. ನಂತರ ಮೊಹರಿನ ನಮೂನೆಯನ್ನು ತಯಾರಿಸಿ ಆರೋಪಿಗಳ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಗಳನ್ನು ದೊರೆತ ಸ್ವತ್ತುಗಳಿಗೆ ಹಚ್ಚಿರುತ್ತಾರೆ. ಸಾರಾಯಿ ಸಾಗಿಸುತ್ತಿದ್ದ ಆಟೋರಿಕ್ಷಾ ಸಂ:ಎಂ.ವೈ.ಎಲ್.6937 ಆಗಿದ್ದು ಹಳದಿ ಮತ್ತು ಕಪ್ಪು ಬಣ್ಣದ ಬಾಡಿಗೆ ರಿಕ್ಷಾವಾಗಿದ್ದು. ಚಾಲಕನು ಇದಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನು ಡ್ರೈವಿಂಗ್ ಲೈಸೆನ್ಸ್‌ನ್ನು ಹಾಜರುಪಡಿಸಿರುವುದಿಲ್ಲ. ರಿಕ್ಷಾದ ಇಂಜಿನ್ ನಂ:175/ಎಲ್‌ಐ:007153

ಇರುತ್ತದೆ. ನಂತರ ಆರೋಪಿಗಳನ್ನು ದಸ್ತಗಿರಿ ಮಾಡಿ ದೊರೆತ ಕಳ್ಳಭಟ್ಟಿ ಸಾರಾಯಿ ಮತ್ತು ಆಟೋರಿಕ್ಷಾವನ್ನು ಜಪ್ತುಪಡಿಸಿ ಇಲಾಖೆಯ ವಶಕ್ಕೆ ತೆಗೆದುಕೊಂಡು ಸ್ಥಳ ಮಹಜರನ್ನು ರಾತ್ರಿ 8.30 ರಿಂದ 9.45 ರ ವರೆಗೆ ತಯಾರು ಮಾಡಲಾಯಿತ್ತು ನಂತರ ಕಛೇರಿಗೆ ಬಂದು ಆರೋಪಿಗಳ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 11,14,34 38 (ಎ) ರ ರೀತ್ಯಾ ಮೊಕದ್ದಮೆ ಸಂ: ಇ.ಐ.ಬಿ.ಅ.ನಿ (3) ಪ್ರಮಾವ ಸಂ: 1/1999-2000 ಮೊಕದ್ದಮೆಯನ್ನು ದಾಖಲುಪಡಿಸಿ ದಾಖಲಾತಿಗಳನ್ನು ನ್ಯಾಯಾಲಯಕ್ಕೆ ಮತ್ತು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಜಪ್ತು ಪಡಿಸಿದ ವಾಹನವನ್ನು ತನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಲು ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಕರಣವನ್ನು ಅಬಕಾರಿ ನಿರೀಕ್ಷಕರು ಕೂಳೂರು ಇವರಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ.

ದಿನಾಂಕ: 3.9.1999 ರಂದು ವಾಹನ ಮಾಲೀಕರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ವಾಹನದ ಬಿಡುಗಡೆಗೆ ಕೋರಿರುತ್ತಾರೆ. ಪ್ರಾಧಿಕಾರವು ಅರ್ಜಿದಾರರ ಕೋರಿಕೆ ಪತ್ರವನ್ನು ತಳ್ಳಿ ಹಾಕಿ ಆದೇಶ ನೀಡಿದ್ದರ ವಿರುದ್ಧ ಅರ್ಜಿದಾರರು ಒಂದನೇ ಹೆಚ್ಚುವರಿ ಸತ್ರ ನ್ಯಾಯಾಲಯ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ಮೇಲ್ಮನವಿ ಸಲ್ಲಿಸಿದ್ದು ಮಾನ್ಯ ಸತ್ರ ನ್ಯಾಯಾಲಯವು ಸಾರಿಗೆ ಅಧಿಕಾರಿಗಳು ನಿಗದಿಪಡಿಸಿದ ಮೊತ್ತಕ್ಕೆ ಬ್ಯಾಂಕ್ ಗ್ಯಾರಂಟಿ ಸಲ್ಲಿಸಿ ವಾಹನವನ್ನು ಮಧ್ಯಂತರ ವಶಕ್ಕೆ ಪಡೆಯಲು ಆದೇಶ ನೀಡಿರುತ್ತದೆ. ಆದರೆ ಅರ್ಜಿದಾರರು ಪ್ರಾಧಿಕಾರಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಸಲ್ಲಿಸಿರುವುದಿಲ್ಲ ಮತ್ತು ವಾಹನವನ್ನು ತಮ್ಮ ಮಧ್ಯಂತರ ವಶಕ್ಕೆ ತೆಗೆದುಕೊಂಡಿರುವುದಿಲ್ಲ.

ನಂತರ ಪ್ರಕರಣದ ವಿಚಾರಣೆಯನ್ನು ಪ್ರಾರಂಭಿಸಿ ಸರ್ಕಾರದ ಅಭಿಯೋಜನೆಯ ಪರ ಮೂರು ಸಾಕ್ಷಿಗಳ ವಿಚಾರಣೆಯನ್ನು ಪ್ರತಿರಕ್ಷಾ ಪರ ಎರಡು ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿ ಅವರ ಹೇಳಿಕೆಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರವಾಗಿ ಒದಗಿಸಲಾಗಿರುವ ಸಾಕ್ಷಿ ಆಧಾರದಿಂದ ಈ ಕೆಳಗಿನ ವಿವಿಧ ಅಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತವೆ.

1. ದಿನಾಂಕ: 4.7.1999 ರಂದು ವಾಹನ ಆಟೋರಿಕ್ಷಾ ಸಂ: ಎಂ.ವೈ. ಎಕ್ಸ್-6937 ರಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಣಿಕೆ ಮಾಡಲಾಗಿತ್ತೇ?
2. ಸದ್ರಿ ವಾಹನದಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ತನ್ನ ತಿಳುವಳಿಕೆಗೆ ಬಾರದಂತೆ ಮಾಡಲಾಗಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತು ಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲೆ ತಿಳಿಸಿರುವ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷ್ಯದ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

1. ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದೂ, ಎರಡನೇ ಅಂಶವನ್ನು ನಕಾರತ್ಮಕವಾಗಿ ಇಲ್ಲ ಎಂದೂ ಮೂರನೇ ಅಂಶವನ್ನು ಕೊನೆಯ ಆದೇಶದಂತೆ.

**ಪ್ರಾಸಾ-2:**

ಅಬಕಾರಿ ನಿರೀಕ್ಷಕರು ಗುಪ್ತವಾರ್ತಾದಳ ಮಂಗಳೂರು ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು ದಿನಾಂಕ: 16.05.2002 ರಂದು ಹಾಜರಾಗಿ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ. ದಿನಾಂಕ: 4.7.1999 ರಂದು ಮಂಗಳೂರು ತಾಲ್ಲೂಕು ಕಾವೂರು ಗ್ರಾಮದ ಕಾವೂರು-ಕೂಳೂರು ರಸ್ತೆಯಲ್ಲಿ ಶಂಕರ್‌ವರ್ಕ್ಸ್ ಮುಂದೆ ರಸ್ತೆಗಾವಲು ನಡೆಸುತ್ತಿದ್ದಾಗ ಸುಮಾರು ರಾತ್ರಿ 8.30 ರ ಸಮಯಕ್ಕೆ ಕಾವೂರು ಕಡೆಯಿಂದ ಕೂಳೂರು ಕಡೆಗೆ ಒಂದು ಆಟೋರಿಕ್ಷಾ ಬರುತ್ತಿದ್ದು ಅನುಮಾನದ ಮೇರೆಗೆ ರಿಕ್ಷಾವನ್ನು ನಿಲ್ಲಿಸಲು ಸೂಚನೆ ನೀಡಲಾಗಿ ಸದ್ರಿ ಸ್ಥಳದಲ್ಲಿ ಆಟೋವನ್ನು ನಿಲ್ಲಿಸದೇ 25 ಗಜ ದೂರ ಮುಂದಕ್ಕೆ ಹೋಗಿ ನಿಲ್ಲಿಸಿದನೆಂದು ಆಟೋರಿಕ್ಷಾದಿಂದ ಒಬ್ಬ ವ್ಯಕ್ತಿಯು ಓಡಿಹೋದನೆಂದು ಆತನನ್ನು ಹಿಡಿಯಲು ಪ್ರಯತ್ನಿಸಲಾಗಿ ಆತನು ಕತ್ತಲಲ್ಲಿ ಪರಾರಿಯಾದನೆಂದು ನಂತರ ರಿಕ್ಷಾದಲ್ಲಿ ಹಿಂದಿನ ಸೀಟಿನಲ್ಲಿ ಒಬ್ಬ ವ್ಯಕ್ತಿಯು ಕುಳಿತ್ತಿದ್ದು ರಿಕ್ಷಾದ ಸೀಟಿನ ಕಾಲಿಡುವ ಸ್ಥಳದಲ್ಲಿ ದ್ರವ ತುಂಬಿದ ಮೂರು ರಬ್ಬರ್ ಟ್ಯೂಬುಗಳು ಇದ್ದು ಸ್ಥಳದಲ್ಲಿ ದೊರೆತ ಪಂಚರನ್ನು ಕರೆಸಿ ರಿಕ್ಷಾ ಶೋಧನೆಗೆ ವಾರೆಂಟು ಪಡೆಯಲು ಕಾಲಾವಕಾಶವಿಲ್ಲದ ಕಾರಣ ಸರ್ಚ್‌ಮೊಮೋವನ್ನು ತಯಾರಿಸಿ ಆಟೋರಿಕ್ಷಾವನ್ನು ಶೋಧನೆ ಮಾಡಲಾಗಿ ಸದ್ರಿ ರಿಕ್ಷಾದಲ್ಲಿ ಮೂರು ಟ್ಯೂಬಿನ ಬಾಯಿಯನ್ನು ಬಿಚ್ಚಿ ನೋಡಲಾಗಿ ಪ್ರತಿಯೊಂದು ಟ್ಯೂಬಿನಲ್ಲಿ 40 ಲೀಟರು ಸಾರಾಯಿಯಂತೆ ಒಟ್ಟು 120 ಲೀಟರು ಸಾರಾಯಿ ಕಂಡು ಬಂತು ಎಂದು ತಿಳಿಸಿರುತ್ತಾರೆ. ಸದ್ರಿ ಸಾರಾಯಿಯನ್ನು ಸಾಗಣಿಕೆ ಮಾಡಲು ರಹದಾರಿ ಪತ್ರ ಕೇಳಲಾಗಿ ರಿಕ್ಷಾದಲ್ಲಿದ್ದ ವ್ಯಕ್ತಿಯಾಗಲಿ ಚಾಲಕನಾಗಲೀ ಯಾವುದೇ ರಹದಾರಿಯನ್ನು ಹಾಜರು ಪಡಿಸಿರುವುದಿಲ್ಲದಿರುವುದರಿಂದ ಇದು ಅಕ್ರಮ ಸಾರಾಯಿ ಸಾಗಾಟವೆಂದು ತೀರ್ಮಾನಿಸಿ, ರಾಸಾಯನಿಕ ಪರೀಕ್ಷೆಗಾಗಿ ಪ್ರತಿ ಟ್ಯೂಬುನಿಂದ 180 ಮಿಲಿ ಲೀಟರು ಸಾರಾಯಿಯನ್ನು ಮೂರು ಸೀಸೆಗಳಿಗೆ ತುಂಬಿಸಿ, ಸೀಸೆಗಳಿಗೂ ಮತ್ತು ಟ್ಯೂಬುಗಳಿಗೂ ಗಟ್ಟಿದಾರ ಕಟ್ಟಿ ಇಲಾಖೆಯ ಮೊಹರು ಮಾಡಲಾಗಿತೆಂದು ತಿಳಿಸಿರುತ್ತಾರೆ. ಆರೋಪಿಗಳ ಹೆಸರು ವಿಳಾಸವನ್ನು ಕೇಳಲಾಗಿ ರಿಕ್ಷಾ ಚಾಲಕನು ತನ್ನ ಹೆಸರು ಕೆ. ಕಂದನ್ ಬಿನ್. ಕೃಷ್ಣಪ್ಪ ಎಂದು ಪ್ರಾಯ:21 ವರ್ಷವೆಂದು ಕೆ.ಇ.ಬಿ. ಕಾಲೋನಿ, ಕಾವೂರು ವಾಸಿ ಎಂದೂ, ಆಟೋದಲ್ಲಿ ಕುಳಿತಿದ್ದ ವ್ಯಕ್ತಿ ಆನಂದ ಬಿನ್. ಗಣಪ್ಪ ಎಂದೂ ಪ್ರಾಯ:35 ವರ್ಷವೆಂದು ಮೂಡುಶೆಡ್ಡೆ ಗ್ರಾಮದ ವಾಸಿ ಎಂದು ಆಟೋದಿಂದ ಓಡಿಹೋದ ವ್ಯಕ್ತಿಯ ಹೆಸರು ಜೋಕಿಮ್ ಡಿಸೋಜಾ. ಬಿನ್. ಇಜಿತ್ ಡಿಸೋಜಾ ಪಡುಶೆಡ್ಡೆ ಕುದ್ರು ಪಡುಶೆಡ್ಡೆ ಗ್ರಾಮ ಎಂದು ತಿಳಿಸಿದರೆಂದು ತಿಳಿಸಿರುತ್ತಾರೆ. ನಂತರ ಆರೋಪಿಗಳ ಹೆಸರು ಮತ್ತು ವಿಳಾಸದ ಗುರುತಿನ ಚೀಟಿಗಳನ್ನು ರಾಸಾಯನಿಕ ಮಾದರಿ ಸೀಸೆಗಳಿಗೆ ಅಂಟಿಸಲಾಯಿತೆಂದು ತಿಳಿಸಿರುತ್ತಾರೆ. ಆಟೋರಿಕ್ಷಾ ಸಂ. ಎಂ.ವೈ.ಎಕ್ಸ್-6937 ಹಳದಿ ಮತ್ತು ಕಪ್ಪು ಬಣ್ಣದ ಬಾಡಿಗೆ ರಿಕ್ಷಾವಾಗಿದ್ದು, ರಿಕ್ಷಾಕ್ಕೆ ಸಂಬಂಧಿಸಿದ ಯಾವುದೇ ದಾಖಲೆಗಳನ್ನು ಹಾಜರುಪಡಿಸಿಲ್ಲವೆಂದು ತಿಳಿಸಿರುತ್ತಾರೆ. ನಂತರ ಆರೋಪಿಗಳನ್ನು ದಸ್ತಗಿರಿ ಮಾಡಿ ದೊರೆತ ಸಾರಾಯಿ ಮತ್ತು ಆಟೋರಿಕ್ಷಾವನ್ನು ಇಲಾಖೆಯು ವಶಪಡಿಸಿಕೊಂಡು ಕಛೇರಿಗೆ ತಂದು ಆರೋಪಿಗಳ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 11,14 ಮತ್ತು 34 38 (ಎ) ರ ರೀತ್ಯಾ ಮೊಕದ್ದಮೆ ಸಂ:ಇ.ಐ.ಬಿ.ಅ.ನಿ(3) ಪ್ರಮಾವ ಸಂ:1/99-2000 ಮೊಕದ್ದಮೆ ದಾಖಲು ಮಾಡಿರುತ್ತಾರೆ. ಪ್ರಕರಣದ

ಮಹಜರು ಪ್ರ.ಮಾ.ವ ವರದಿಯನ್ನು ನ್ಯಾಯಾಲಯಕ್ಕೂ ಈ ಪ್ರಾಧಿಕಾರಕ್ಕೂ ಸಲ್ಲಿಸಿರುತ್ತಾರೆ. ತಕ್ಷೀರಿನ ಸ್ಥಳದಲ್ಲಿ ತಯಾರಿಸಲಾದ ಮೂಲ ಮಹಜರನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು ಅದರ ಪ್ರತಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ-1 ಎಂದೂ ಅದರಲ್ಲಿದ್ದ ತನ್ನ ಸಹಿಯನ್ನು ನಿಶಾನೆ ಪಿ.1 (ಎ) ಎಂದೂ ಪ್ರ.ಮಾ.ವ ಪ್ರತಿಯನ್ನು ನೋಡಿದ್ದು ಅದನ್ನು ನಿಶಾನೆ ಪಿ.2 ಎಂದೂ ಅದರಲ್ಲಿನ ತನ್ನ ಸಹಿಯನ್ನು ನಿಶಾನೆ ಪಿ.2 (ಎ) ಎಂದು ಗುರುತಿಸಲಾಗಿದೆ. ದಸ್ತಗಿರಿ ಮಾಡಲಾದ ಆರೋಪಿಗಳನ್ನು ದಿನಾಂಕ: 5.7.1999 ರಂದು ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತೇನೆ ಎಂದು ಮುಂದಿನ ತನಿಖೆಗಾಗಿ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಸ್ವತ್ತುಗಳೊಂದಿಗೆ ದಿನಾಂಕ: 9.7.99 ರಂದು ಹಸ್ತಾಂತರಿಸಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತ ತಾನು ತಕ್ಷೀರು ಸ್ಥಳಕ್ಕೆ 7.15 ಕ್ಕೆ ತಲುಪಿರುತ್ತೇನೆ. ಸ್ವತಂತ್ರ ಸಾಕ್ಷಿಯನ್ನು ಕರೆದು ಮಹಜರು ಮಾಡಿರುತ್ತೇನೆ. ಆತನ ವಿಳಾಸ ಸುಭಾಷ ನಗರ ಎಂದು ಇರುತ್ತದೆ ಈ ತಕ್ಷೀರಿನ ಅಪರಾಧಿ ಜಾಕಿಂ ಡಿಸೋಜಾ ಇವರ ಪರಿಚಯ ಮೊಕದ್ದಮೆ ದಾಖಲಿಸುವ ಮುನ್ನ ಇರುವುದಿಲ್ಲ. ಆತನ ಮೇಲಿನ ಹಗೆಯಲ್ಲಿ ಮೊಕದ್ದಮೆಯನ್ನು ದಾಖಲಿಸಿಲ್ಲ ದಿನಾಂಕ: 4.7.1999 ರಂದು 8.30 ಕ್ಕೆ ಆಟೋರಿಕ್ಷಾವನ್ನು ಕಳ್ಳಭಟ್ಟಿ ಸಾರಾಯಿ ಸಮೇತ ಕಾವೂರಿನಲ್ಲಿ ಜಪ್ತುಗೊಳಿಸಿರುತ್ತೇನೆ. ಮಹಜರನ್ನು ಮುಕ್ತಾಯಗೊಳಿಸಲು ಸುಮಾರು 45 ನಿಮಿಷಗಳ ಸಮಯ ತಗುಲಿದೆಯೆಂದು ತಿಳಿಸಿರುತ್ತಾರೆ. ಪಾಟೀ ಸವಾಲಿನಲ್ಲಿ ಸಾಕ್ಷಿದಾರರ ಹೇಳಿಕೆಯನ್ನು ನಂಬದಿರಲು ಯಾವುದೇ ಕಾರಣಗಳು ವ್ಯಕ್ತವಾಗಿಲ್ಲ. ಈ ಸಾಕ್ಷಿಯಿಂದ ವಾಹನ ಮಾಲೀಕರಿಗೆ ಯಾವುದೇ ಹೆಚ್ಚಿನ ಪ್ರಯೋಜನಕಾರಿಯಾದ ಅಂಶಗಳು ಕಂಡು ಬರುವುದಿಲ್ಲ.

**ಪ್ರಾ.ಸಾ-3**

ಈ ಸಾಕ್ಷಿದಾರನ ಹೇಳಿಕೆಗೆ ಪೂರಕವಾಗಿ ಮೊಕದ್ದಮೆಯ ತನಿಖಾಧಿಕಾರಿಗಳು ಈ ಪ್ರಾಧಿಕಾರದ ಮುಂದೆ ದಿನಾಂಕ: 7.11.2000 ರಂದು ಸಾಕ್ಷಿ ನುಡಿಯುತ್ತ ತಾನು ದಿನಾಂಕ: 9.7.99 ರಂದು ಮೊಕದ್ದಮೆಗೆ ಸಂಬಂಧಿಸಿದ ಸ್ವತ್ತು ದಾಖಲೆ ಪತ್ರಗಳನ್ನು ಪಡೆದು ದಿನಾಂಕ: 27.7.1999 ರಂದು ತಕ್ಷೀರಿನ ಮಾದರಿ ಸೀಸೆಗಳನ್ನು ತನ್ನ ಕಛೇರಿಯ ಅಬಕಾರಿ ರಕ್ಷಕ ಶಿವಾನಂದ ಇವರ ಮೂಲಕ ರಾಸಾಯನಿಕ ವಿಶ್ಲೇಷಣೆಗಾಗಿ ರಾಸಾಯನಿಕ ವಿಶ್ಲೇಷಣಾಧಿಕಾರಿಗಳಿಗೆ ಕಳುಹಿಸಿದ್ದು ದಿನಾಂಕ: 4.9.1999 ರಂದು ರಾಸಾಯನಿಕ ವರದಿ ಮತ್ತು ಮಾದರಿ ಸೀಸೆಗಳನ್ನು ಪಡೆದಿರುವುದಾಗಿ ತಿಳಿಸಿರುತ್ತಾರೆ. ರಾಸಾಯನಿಕ ವರದಿಯ ಮೂಲ ಪ್ರತಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿದ್ದು ಅದರ ಛಾಯಾ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು ಅದನ್ನು ಗುರುತಿಸಿರುತ್ತಾರೆ. ರಾಸಾಯನಿಕ ತಜ್ಞರ ವಿಶ್ಲೇಷಣಾ ವರದಿ ನಿಶಾನೆ ಪಿ.3 ಎಂದು ಗುರುತಿಸಲಾಗಿದೆ. ಈ ಮೊಕದ್ದಮೆಯ ದೋಷಾರೋಹಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ದಿನಾಂಕ: 4.10.1999 ರಂದು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

**ಪ್ರಾ.ಸಾ-1**

ಶ್ರೀ ಎಂ. ಶಿವಾನಂದ ಅಬಕಾರಿ ರಕ್ಷಕ ಕೂಳೂರು ವಲಯ ಇವರು ಈ ಪ್ರಾಧಿಕಾರದ ಮುಂದೆ ದಿನಾಂಕ: 18.4.2002 ರಂದು ಸಾಕ್ಷಿ ನುಡಿದಿದ್ದು ದಿನಾಂಕ: 27.7.99 ರಂದು ಈ ಮೊಕದ್ದಮೆಗೆ ಸಂಬಂಧಿಸಿದ 3 ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣಾ ಕಛೇರಿಗೆ ತಲುಪಿಸಿದ್ದು ದಿನಾಂಕ: 4.9.99 ರಂದು ವಿಶ್ಲೇಷಣಾ ವರದಿಯನ್ನು ರಾಸಾಯನಿಕ ತಜ್ಞರಿಂದ ಪಡೆದು ಅಬಕಾರಿ ನಿರೀಕ್ಷಕರು, ಕೂಳೂರು ಇವರಿಗೆ ತಲುಪಿಸಿರುವುದಾಗಿ ತಿಳಿಸಿರುತ್ತಾರೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಅಭಿಯೋಜನೆ ಪರ ಪ್ರಾ.ಸ. 1,2 ಮತ್ತು 3ರ ಸಾಕ್ಷಿ ಹೇಳಿಕೆಗಳಿಂದ ಮತ್ತು ಹಾಜರುಪಡಿಸಿರುವ ದಾಖಲೆಗಳ ಆಧಾರದಿಂದ ಜಪ್ತು ಪಡಿಸಲಾದ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟ ಮಾಡಿರುವುದು ಸಾಬೀತಾಗಿರುತ್ತದೆ. ಆದುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಪ್ರಕರಣದ ಎರಡನೇ ಅಂಶವೇನೆಂದರೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ವಾಹನದ ಮಾಲೀಕಳು ತನ್ನ ತಿಳುವಳಿಕೆಗೆ ಇಲ್ಲದೇ ಈ ಅಕ್ರಮ ಜರುಗಿದೆ ಎಂದು ಸಾಬೀತುಗೊಳಿಸಬೇಕಾಗಿರುತ್ತದೆ. ವಾಹನ ಮಾಲೀಕಳಾದ ಶ್ರೀಮತಿ ನೀಲಮ್ಮ ಇವರು ಈ ಪ್ರಾಧಿಕಾರಕ್ಕೆ ಒಂದು ಅರ್ಜಿಸಲ್ಲಿಸಿ ತಾನು ನಿರಪರಾಧಿ ಮತ್ತು ಯಾವುದೇ ಅಪರಾಧ ಎಸಗಿಲ್ಲವಾದ್ದರಿಂದ ವಾಹನವನ್ನು ತನಗೆ ಮರಳಿ ಕೊಡಬೇಕೆಂದು ಕೇಳಿರುತ್ತಾರೆ. ಪ್ರಾಧಿಕಾರವು ಈ ಬಗ್ಗೆ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆದಿರುತ್ತದೆ.

**ಡಿ.ಡಬ್ಲ್ಯೂ 1:**

ಈ ಪ್ರಕರಣದಲ್ಲಿ ಜಪ್ತು ಪಡಿಸಲಾಗಿರುವ ವಾಹನ ಮಾಲೀಕಳಾದ ನೀಲಮ್ಮ ಈ ಪ್ರಾಧಿಕಾರದ ಮುಂದೆ ನೀಡಿದ ಹೇಳಿಕೆಯಲ್ಲಿ ತನ್ನ ಜೀವನಾಂಶದ ಹೆಚ್ಚಿನ ಆದಾಯಕ್ಕಾಗಿ ಆಟೋ ರಿಕ್ಷಾವನ್ನು ಖರೀದಿಸಿ ಬಾಡಿಗೆಗಾಗಿ ಓಡಿಸುತ್ತಿರುವುದಾಗಿ ಮತ್ತು ಒಬ್ಬ ಚಾಲಕನನ್ನು ನೇಮಿಸಿರುವುದಾಗಿ ತಿಳಿಸಿರುತ್ತಾರೆ. ಚಾಲಕನು ರಿಕ್ಷಾವನ್ನು ಬೆಳಿಗ್ಗೆ 8.00 ಗಂಟೆಗೆ ಕೊಂಡುಹೋದರೆ ಬಾಡಿಗೆ ಮಾಡಿ ರಿಕ್ಷಾವನ್ನು ದಿನಕ್ಕೆ ರೂ.50/- ಬಾಡಿಗೆಯನ್ನು ತಂದು ಕೊಡುತ್ತಿದ್ದ ಎಂದೂ ಎರಡೂವರೆ ವರ್ಷದಿಂದ ಸದ್ರಿ ರಿಕ್ಷಾವು ತನ್ನ ಸ್ವಾಧೀನದಲ್ಲಿತ್ತು. ಸದ್ರಿ ರಿಕ್ಷಾವನ್ನು ಪೊಲೀಸ್‌ನವರು ಕೊಂಡು ಹೋಗಿದ್ದಾರೆಂದು ಹಾಗೂ ಅದರಲ್ಲಿದ್ದ ಜನಗಳು ಓಡಿ ಹೋದರೆಂದು ಡ್ರೈವರ್ ಹೇಳಿದ ಮೇರೆಗೆ ನಾನು ಹೋಗಿ ರಿಕ್ಷಾ ಬಾಬ್ತು ವಿಚಾರಿಸಿದೆನೆಂದು ಹೇಳಿರುತ್ತಾರೆ. ಚಾಲಕನು ದಿನಕ್ಕೆ ರೂ.50/- ಗಳನ್ನು ತಂದು ಕೊಡುತ್ತಿದ್ದ ಮತ್ತು ಪ್ರಾಮಾಣಿಕನಾಗಿದ್ದ ಯಾವುದೇ ಸಂದೇಹವಿರಲಿಲ್ಲ ಎಂಬುದಾಗಿ ಹೇಳಿರುತ್ತಾರೆ. ಆದರೆ ಪಾಟೀ ಸವಾಲಿನಲ್ಲಿ ಚಾಲಕನ ಹೆಸರು ಕಂದನ್ ಅವನ ವಿಳಾಸ ನನಗೆ ಗೊತ್ತಿಲ್ಲ. ಆತನು ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 8.00 ಗಂಟೆಯವರೆಗೆ ಎಲ್ಲಿ ಎಲ್ಲಿ ಹೋಗುತ್ತಿದ್ದ ಎಂಬುದು ತನಗೆ ತಿಳಿಯದು ಆದರೆ ರಿಕ್ಷಾವನ್ನು ಕಾವೂರಿನಲ್ಲಿ ನಿಲ್ಲಿಸುತ್ತಿದ್ದ ಎಂದು ನುಡಿದಿರುತ್ತಾರೆ.

**ಡಿ.ಡಬ್ಲ್ಯೂ 2:**

ಈ ಪ್ರಕರಣದಲ್ಲಿ ಜಪ್ತು ಮಾಡಿಸಲಾಗಿರುವ ವಾಹನ ಚಾಲಕನಾದ ಕಂದನ್ ಎಂಬುವರು ಈ ಪ್ರಾಧಿಕಾರದ ಮುಂದೆ ದಿನಾಂಕ: 24.04.03 ರಂದು ಸಾಕ್ಷಿ ನುಡಿದಿರುತ್ತಾರೆ. ಆತನು ಸುಮಾರು 4-5 ವರ್ಷಗಳ ಹಿಂದೆ ರಿಕ್ಷಾವನ್ನು ಕಾವೂರಿನಲ್ಲಿ ಮಾರ್ಗದ ಬಳಿ ನಿಲ್ಲಿಸಿದ್ದಾಗ

ಅಬಕಾರಿ ಅಧಿಕಾರಿಗಳು ಜೀಪಿನಲ್ಲಿ ಬರುವುದನ್ನು ಕಂಡು ರಿಕ್ಷಾ ಪಕ್ಕದಲ್ಲಿದ್ದ ಇಬ್ಬರು ಓಡಿ ಹೋಗುವುದನ್ನು ನೋಡಿ ನನ್ನಲ್ಲಿಗೆ ಬಂದು ರಿಕ್ಷಾವನ್ನು ಮತ್ತು ನನ್ನನ್ನು ಆಫೀಸಿಗೆ ಕರೆದುಕೊಂಡು ಹೋದರೆಂದು ನುಡಿದಿರುತ್ತಾನೆ. ಅದಲ್ಲದೆ ತನ್ನ ಮೇಲೆ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಹೂಡಿದ್ದ ಮೊಕದ್ದಮೆಯಲ್ಲಿ ತಾನು ನಿರಪರಾಧಿ ಎಂದು ಬಿಡುಗಡೆಯಾಗಿದೆ ಎಂದು ತಿಳಿಸಿರುತ್ತಾನೆ. ಆದರೆ ಪಾಟೀಸವಾಲಿನಲ್ಲಿ ತಾನು ವಾಹನ ಮಾಲೀಕರು ನೀಲಮ್ಮ ಇವರ ಮಗ ಎಂದು ಪ್ರಪ್ರಥಮವಾಗಿ ತಿಳಿಸಿರುತ್ತಾನೆ. ಈ ವಿಷಯವನ್ನು ವಾಹನ ಮಾಲೀಕರಾದ ನೀಲಮ್ಮ ಇವರು ತಮ್ಮ ಸಾಕ್ಷಿಯಲ್ಲಿ ಚಾಲಕನು ತನ್ನ ಮಗನೆಂಬ ವಿಷಯವನ್ನು ಗೌಪ್ಯವಾಗಿ ಇಟ್ಟಿರುತ್ತಾಳೆ ಮತ್ತು ವಾಹನ ಮಾಲೀಕರಾದ ನೀಲಮ್ಮ ತನ್ನ ಹೇಳಿಕೆಯಲ್ಲಿ ಚಾಲಕ ಕಂದನ್ ಎಂದೂ ಆತನ ವಿಳಾಸ ಗೊತ್ತಿಲ್ಲವೆಂದು ರೂ.50/-ಗಳನ್ನು ಕೊಡುತ್ತಿದ್ದ ಎಂದು ಬೆಳಿಗ್ಗೆ 8.00 ಗಂಟೆಯಿಂದ ರಾತ್ರಿ 8.00 ಗಂಟೆಯ ವರೆಗೆ ಎಲ್ಲಿ ಎಲ್ಲಿ ಹೋಗುತ್ತಿದ್ದ ಎಂಬುದು ತನಗೆ ತಿಳಿಯದು ಎಂದು ತಿಳಿಸಿರುತ್ತಾಳೆ. ಈ ಸಾಕ್ಷ್ಯಾಧಾರದ ಹೇಳಿಕೆಗಳು ಅನುಮಾನಸ್ಪಾದವಾಗಿದ್ದು ಸತ್ಯಾಂಶವನ್ನು ಮುಚ್ಚುಮರೆ ಮಾಡುತ್ತಿರುವುದು ಅರಿವಾಗುತ್ತದೆ ಮತ್ತು ಈ ಸಾಕ್ಷ್ಯಾಧಾರದ ಹೇಳಿಕೆಗಳಿಂದ ಜಪ್ತುಪಡಿಸಲಾದ ವಾಹನವು ವಾಹನ ಮಾಲೀಕರಿಗೆ ತಿಳಿಯದೇ ಸಾರಾಯಿ ಕಳ್ಳಸಾಗಣಿಕೆಗೆ ಉಪಯೋಗಿಸಲ್ಪಟ್ಟಿತ್ತು ಎಂಬುದು ಸಾಬೀತಾಗಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಬಹುದು. ಆದುದರಿಂದ ವಾಹನ ಮಾಲೀಕರ ತಿಳುವಳಿಕೆಯಿಂದಲೇ ಈ ಅಕ್ರಮ ಕಳ್ಳಭಟ್ಟಿ ಸಾರಾಯಿಯ ಸಾಗಣಿಕೆಯಾಗಿದೆ ಎಂದು ಈ ಪ್ರಾಧಿಕಾರವು ತೀರ್ಮಾನಕ್ಕೆ ಬರಬೇಕಾಗುತ್ತದೆ.

ಈ ಮೇಲಿನ ಕಾರಣಗಳಿಂದ ವಾಹನ ಮಾಲೀಕರಾದ ನೀಲಮ್ಮ ಇವರು ತನ್ನ ತಿಳುವಳಿಕೆಗೆ ಬಾರದೇ ವಾಹನವನ್ನು ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸ್ಪಟ್ಟಿತ್ತು ಎಂಬುದನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ. ಈ ಕಾರಣದಿಂದ 2ನೇ ಅಂಶವನ್ನು ನಕರಾತ್ಮಕವಾಗಿ ಪರಿಗಣಿಸಲಾಗಿದೆ.

ಈ ಎಲ್ಲಾ ಕಾರಣಗಳಿಂದ ಪ್ರಕರಣದಲ್ಲಿ ಜಪ್ತುಪಡೆದಿದ್ದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂ: ಎಸ್‌ಡಿಕೆ:4:ಡಿಟಿಸಿಆರ್:1999-2000 ದಿನಾಂಕ: 28ನೇ ಆಗಸ್ಟ್ 2003**

ಗೋವಿಂದಪ್ಪ ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965 ಕಲಂ 43 (ಎ)ರ ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ನಂ. 2 ಗುಪ್ತವಾರ್ತಾದಳ, ಮಂಗಳೂರು ವಿಭಾಗ, ಮಂಗಳೂರು ಇವರು ದಾಖಲು ಮಾಡಿದ ಮೊಕದ್ದಮೆ ಸಂಖ್ಯೆ: ಇ.ಐ.ಬಿ. ಅ.ಇ.(3) ಪ್ರ.ಮಾ.ವ. ನಂ: 1/1999-2000 ದಿನಾಂಕ: 4.07.1999 ರಲ್ಲಿ ಜಪ್ತುಪಡಿಸಲಾಗಿರುವ ವಾಹನ ಆಟೋರಿಕ್ಷಾ ಸಂ: ಎಂ.ವೈ.ಎಕ್ಸ್-6937 ನ್ನು ಕರ್ನಾಟಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 28.8.2003 ರಂದು ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತ್ತು.

**ಗೋವಿಂದಪ್ಪ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ. ಕ. ಜಿಲ್ಲೆ. ಮಂಗಳೂರು.

**ಅನುಬಂಧ - 1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

| | | |
|---|---|---|
| ಪ್ರಾ.ಸಾ. 1 | - | ಶ್ರೀ ಶಿವಾನಂದ ಅಬಕಾರಿ ರಕ್ಷಕ, ಕೂಳೂರು ವಲಯ |
| ಪ್ರಾ.ಸಾ. 2 | - | ಶ್ರೀ ಜಿ. ಕೆ. ಸುಬ್ರಮಣ್ಯ ಅಬಕಾರಿ ನಿರೀಕ್ಷಕರು ಗುಪ್ತವಾರ್ತಾದಳ ಮಂಗಳೂರು ವಿಭಾಗ ಮಂಗಳೂರು |
| ಪ್ರಾ.ಸಾ.3 | - | ಶ್ರೀ ಎಂ. ಲಿಂಗಣ್ಣ ಅಬಕಾರಿ ನಿರೀಕ್ಷಕರು, ಕೂಳೂರು ವಲಯ |

**ಅನುಬಂಧ - 2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | | | |
|---|---|---|---|
| ನಿಶಾನೆ | ಪಿ-1 | - | ಮಹಾಜರು ಪ್ರತಿ |
| ನಿಶಾನೆ | ಪಿ-1ಎ | - | ಅದರ ಮೇಲಿನ ಸಹಿ. |
| ನಿಶಾನೆ | ಪಿ-2 | - | ಪ್ರಥಮ ವರ್ತಮಾನ ವರದಿಯ ಪ್ರತಿ |
| ನಿಶಾನೆ | ಪಿ-2ಎ | - | ಅದರ ಮೇಲಿನ ಅವರ ಸಹಿ. |
| ನಿಶಾನೆ | ಪಿ-3 | - | ರಾಸಾಯನಿಕ ವರದಿಯ ಪ್ರತಿ |

**ಅನುಬಂಧ - 3**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

| | | |
|---|---|---|
| ಡಿ.ಡಬ್ಲ್ಯೂ-1 | - | ವಾಹನ ಮಾಲೀಕರು |
| ಡಿ.ಡಬ್ಲ್ಯೂ-2 | - | ವಾಹನ ಚಾಲಕರು |

**ಅನುಬಂಧ - 4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು - ಇಲ್ಲಾ

**ಗೋವಿಂದಪ್ಪ**
ಪಿ.ಆರ್.1033
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ. ಕ. ಜಿಲ್ಲೆ. ಮಂಗಳೂರು.